# ಬಿಜ್ಜಮಹಾದೇವಿ

( ಏಕಾಂಕ ನಾಟಕ )



ಬರೆದವರು:

ಮಲ್ಲಿಕಾರ್ಜುನ ಶಿ. ಅತ್ತಿ

೧೯೫೬ ]    [ ಬೆಲೆ ೮ ಆಣೆ.

# ಈಗಾಗಲೇ ಪ್ರಕಟವಾದ ಕೃತಿಗಳು



೧ ಕೆಳದಿಯ ಚೆನ್ನಮ್ಮ — ಎನ್. ಡಿ. ಬಗರಿ
೨ ನುಲಿಯ ಚಂದಯ್ಯ — ವೀ. ಸಾ. ಸಮಿತಿ
೩ ಅಮರಜ್ಯೋತಿ — ವ್ಹಿ. ಕೆ. ಕರಡಿ
೪ ಮಹಾದೇವಿಯಕ್ಕ — ಮಲ್ಲಿಕಾರ್ಜುನ ಲಕ್ಷ್ಮಿ
೫ ಕಾರಣಿಕ ಬಸವ ಮತ್ತು
ಕಾಯಕ ವೈಭವ — ವ್ಹಿ. ಕೆ. ಕರಡಿ
೬ ಬಿಜ್ಜ ಮಹಾದೇವಿ — ಎಮ್. ಎಸ್. ಲಕ್ಷ್ಮಿ

## ಮುಂಬರುವ ಕೃತಿ

೧ ಆಧ್ಯಾತ್ಮಿಕ ಭಾವಗೀತೆಗಳು — ಸಂಗಮೇಶ್ವರ

ಬಿ. ಜಿ. ಇಂಗಳೇಶ್ವರ (ಕಾರ್ಯಾಧ್ಯಕ್ಷ)
ವೀರಶೈವ ಸಾಹಿತ್ಯ ಸಂಸ್ಕೃತಿ ಪ್ರಕಾಶನ ಸಮಿತಿ,
(೪೫೭೪, ಶೆಟ್ಟಿಗಲ್ಲಿ) ಬೆಳಗಾವಿ.

# ಬಿಜ್ಜಮಹಾದೇವಿ

( ಏಕಾಂಕ ನಾಟಕ )



ಬರೆದವರು:

ಮಲ್ಲಿಕಾರ್ಜುನ ಶಿ. ಲಠ್ಠೆ.

ಪ್ರಕಾಶಕರು:

ವೀರಶೈವ ಸಾಹಿತ್ಯ ಸಂಸ್ಕೃತಿ-ಪ್ರಕಾಶನ ಸಮಿತಿ,
ಬೆಳಗಾವಿ.



( ಮೊದಲನೆಯ ಮುದ್ರಣ ೨೦೦೦ ಪ್ರತಿಗಳು. )

೧೯೫೬. ] [ ಬೆಲೆ ೮ ಆಣೆ.

# ಪ್ರೇಮವೇ-ದೇವರು!

ಭಕ್ತಿಯೆಂಬುದ ಮಾಡಲಾಗದು. ನೋಡಲಾಗದು. ನುಡಿಯಲಾಗದು. ಅದೊಂದು ಬಾಳಬಾಯಿಧಾರೆ! ಆದರೂ ನಿಸ್ಸೀಮವಾದ ಪ್ರೇಮವೇ ಭಕ್ತಿ! ಆ ಪ್ರೇಮವೇ ದೇವರೆಂದು ಹೇಳಬಹುದು. "ಪರಮಾತ್ಮನು ಇಪ್ಪಾನೆ" ಎಂದು ದೃಢಭಕ್ತಿಯಿಂದ ನಂಬಿ ಅಂತಃಕರುಣದಿಂದ ಅವನನ್ನು ಪ್ರೀತಿಸುತ್ತ ಹೋದರೆ ನಿಜವಾಗಿಯೂ ಮಾನವನು ನಿಜದ ನೆಲೆಯನ್ನರಿಯುವುದರಲ್ಲಿ ಯಾವ ಸಂದೇಹವೂ ಇಲ್ಲ. ಅಂಥವನ ಜೀವನವೇ ಪವಿತ್ರ ಜೀವನ! ಅದುವೇ ಮುಕ್ತಿಯ ಸಾಧನ!

ಹನ್ನೆರಡನೆಯ ಶತಮಾನದಲ್ಲಿ ಜಗಜ್ಯೋತಿ ಬಸವೇಶ್ವರರು ಕಾಯಕ ತತ್ವವನ್ನು ಬೀರಿ "ಕಾಯಕವ ಮಾಡಿರಣ್ಣಾ, ಕಾಯಕವೇ ಕೈಲಾಸವಯ್ಯ" ಎಂದು ಹೇಳಿದರು. ಪ್ರತಿಯೊಬ್ಬನಿಗೂ ಕಾಯಕ ಅತ್ಯವಶ್ಯ ಎಂದು ಹೇಳಿ ಕಾಯಕದಲ್ಲಿಯ ಮೇಲು-ಕೀಳು ಭಾವನೆಯನ್ನು ತೆಗೆದು ಹಾಕಿದರು. ಇಂಥ ಉಚ್ಚತಮವಾದ ಸತ್ಯ-ಶುದ್ಧ ಕಾಯಕ ತತ್ವವನ್ನು ಅಂತಃಶುದ್ಧಿಯಿಂದ ಪಾಲಿಸುತ್ತ ನಾಡಿನ ಸರ್ವಾಂಗೀಣ ಉನ್ನತಿಗಾಗಿ ಹೆಣಗಿದ ಹನ್ನೆರಡನೆಯ ಶತಮಾನದ ಶಿವಶರಣರನ್ನು ನೆನೆದಾಗ ಹೆಮ್ಮೆಪಟ್ಟುಕೊಳ್ಳಬೇಕಾಗುತ್ತದೆ. ಅದೇ ತತ್ವವನ್ನು ಇಪ್ಪತ್ತನೆಯ ಶತಮಾನದಲ್ಲಿಯ ಮಹಾತ್ಮಾ ಗಾಂಧಿಯವರು ಅನುಸರಿಸಿ ರಾಟಿಯಿಂದ ನೂಲು ತೆಗೆಯಿರಿ ಎಂದು ಸಾರಿದರು. ಸತ್ಯ-ಶಾಂತಿ-ಅಹಿಂಸೆಗಳಿಂದ ಬ್ರಿಟಿಶರನ್ನು ಮಂತ್ರಮುಗ್ಧರನ್ನಾಗಿ ಮಾಡಿದರು. ಮಹಾತ್ಮರು ಅನುಸರಿಸಿದ ತತ್ವಗಳನ್ನು ನಾವೂ ಅನುಸರಿಸಿದಲ್ಲಿ ೧೨ನೇ ಶತಮಾನದ ಕ್ರಾಂತಿಯ ದೀಪ ಮತ್ತೊಮ್ಮೆ ಬೆಳಗಬಹುದು. ನುಡಿವಂತೆ ನಡೆಯಾಗಿ ಪ್ರತಿಯೊಬ್ಬರೂ ಕಾಯಕನಿಷ್ಠರಾದರೆ ನಾಡಿನ ಸಂಪತ್ತಿಯು ಬೆಳೆಯುವುದಲ್ಲದೆ ನಿರುದ್ಯೋಗ ಸಮಸ್ಯೆ ತಾನೇ ತಾನಾಗಿ ಬಯಲಾಗುವುದು. ಎಲ್ಲರೂ ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ ದೊರಕಿಸಿಕೊಂಡು ಸುಖದಿಂದ ಬಾಳಬಲ್ಲರು. ಈ ಪರಿಯ ಬಾಳ ಬಟ್ಟೆಯೇ ದೇವರಿಗೆ ಭೂಷಣ!

ಈ ರಾಟಿಕಾಯಕವಿಡಿದು ಕೈಲಾಸ ಕಂಡ ಬಿಜ್ಜಮಹಾದೇವಿಯ ಚರಿತ್ರೆ ಅಪ್ರತಿಮವಾದುದು. ತನ್ನ ಮುಗ್ಧಭಕ್ತಿಯಿಂದ ಪರಮಾತ್ಮನನ್ನು

ಕಂದನನ್ನಾಗಿ ಬರಮಾಡಿಕೊಂಡು ನಿಸ್ಸೀಮವಾದ ಪ್ರೇಮದಿಂದ ಅವನನ್ನು ಪ್ರೀತಿಸಿ, ಶಿವನ ತಾಯಿಯಾಗಿ ಆದರ್ಶ ಮಾತೆಯಾಗಿದ್ದಾಳೆ. ಅದನ್ನು ಚಿತ್ರಿಸುವುದೇ ಈ ಏಕಾಂಕ ನಾಟಕದ ಗುರಿ! ಈಗ ಪ್ರಕಟವಾಗುತ್ತಿರುವುದು ನಾನು ಬರೆದ ಎರಡನೆಯ ನಾಟಕ "**ಬಿಜ್ಜಮಹಾದೇವಿ.**" ಭಕ್ತಕವಿ ಹರಿಹರನ ಬಿಜ್ಜಮಹಾದೇವಿ ಎಂಬ ರಗಳೆಯ ಆಧಾರದಿಂದ ನೀತಿಬೋಧೆ ಮನರಂಜನೆಯು ಮುಖಾಂತರವಾಗಿ ಆದಷ್ಟು ವಿಹಿತವೆಂದು ಬಿಜ್ಜಮಹಾದೇವಿಯ ಚರಿತ್ರೆಯನ್ನು ನಾಟಕರೂಪದಲ್ಲಿ ಹೆಣೆದಿದ್ದೇನೆ.

ಈ ನಾಟಕದ ಕೈಬರಹದ ಪ್ರತಿಯನ್ನು ಓದಿ, ಸಲಹೆ ಸೂಚನೆಗಳನ್ನಿತ್ತು ಪ್ರೋತ್ಸಾಹಿಸಿದ ನನ್ನ ಪೂಜ್ಯ ಗುರುಗಳಾದ **ಶ್ರೀ. ವ್ಹಿ. ಕೆ. ಕರಡಿ** (B A; B T.) ಹಾಗೂ ಪ್ರೊ. **ವ್ಹಿ. ಡಿ. ಕುಲಕರ್ಣಿ** (M. A.) ಅವರಿಗೆ ನನ್ನ ಅನಂತ ಪ್ರಣಾಮಗಳನ್ನರ್ಪಿಸುವೆ. ತೊಟ್ಟಿಲಸಮಾರಂಭದ ಸನ್ನಿವೇಶಕ್ಕೆ ಕಳೆಯನ್ನಿತ್ತ ಶ್ರೀಮತಿ **ಹೊಳಿಹೊಸೂರ** ಹಾಗೂ ಈ ನಾಟಕವನ್ನು ತಮ್ಮ ಶಾಲೆಯ ವಿದ್ಯಾರ್ಥಿನಿಯರಿಂದ ರಂಗಭೂಮಿಯ ಮೇಲೆ ಅತ್ಯುತ್ತಮ ರೀತಿಯಿಂದ ಆಡಿಸಿ ನನಗೆ ಪ್ರೋತ್ಸಾಹವಿತ್ತ ಕನ್ನಡ ಹೆಣ್ಣು ಮಕ್ಕಳ ೨ನೇ ನಂಬರ ಶಾಲೆಯ ಪ್ರಧಾನ ಶಿಕ್ಷಕಿಯರಾದ ಶ್ರೀಮತಿ **ಗರಗ** ಹಾಗು ಉಳಿದ ಶಿಕ್ಷಕಿಯರಿಗೂ, ನಟಿವರ್ಗದವರಿಗೂ, ಅಲ್ಲದೆ ಈ ನಾಟಕವನ್ನು ಇದ್ದಕ್ಕಿದ್ದಂತೆ ವಿಮರ್ಶಿಸಿ ನನಗೆ ಪ್ರೋತ್ಸಾಹವಿತ್ತ ಶ್ರೀ. **ಸಂಗಮೇಶ್ವರ** (ಕೊಂಗವಾಡ), **ಶ್ರೀ. ಮಲ್ಲಾಬಾದಿ ವೀರಭದ್ರಪ್ಪ, ಶ್ರೀ. ವ್ಹಿ. ಎಮ್. ದಿಬ್ಬಿ,** (M A. B.T.; D B.E.) **ಶ್ರೀ. ಚುಳಕಿ, ಶ್ರೀ. ಬಿ. ಬಿ ಕರಡಿ** (B.A; B Ed.) **ಶ್ರೀ. ಮುರುಗೇಶ** ಹಾಗೂ 'ವೀರಶೈವ ಸಾಹಿತ್ಯ-ಸಂಸ್ಕೃತಿ ಪ್ರಕಾಶನ ಸಮಿತಿ' ಯವರಿಗೂ ನನ್ನ ಅನಂತ ಕೃತಜ್ಞತೆಗಳು. ಅಲ್ಲದೆ ಅಂದವಾಗಿಯೂ ಅಚ್ಚುಕಟ್ಟಾಗಿಯೂ ಮುದ್ರಿಸಿ ಕೊಟ್ಟ **ಶ್ರೀಮಹಾವೀರ** ಮುದ್ರಣಾಲಯದ ಒಡೆಯರಿಗೂ ನನ್ನ ಕೃತಜ್ಞತೆಗಳು.

ಎಂದಿನಂತೆ ಇನ್ನು ಮುಂದೆಯೂ ಸಹೃದಯರಾದ ಕನ್ನಡಿಗರು ಪ್ರೋತ್ಸಾಹಿಸುವರೆಂದು ನಂಬಿದ್ದೇನೆ.

ಬೆಳಗಾವಿ. — **ಮಲ್ಲಿಕಾರ್ಜುನ ಶಿ. ಲಠ್ಠೆ.**

ದಿ. ೧-೬-೫೬

# ಅಭಿಪ್ರಾಯ.



ಇದೊಂದು ಕರುಣಾರಸಪೂರ್ಣ ಏಕಾಂಕ ನಾಟಕ. ಎಷ್ಟೇ ಹಳೆಯ ಕಥೆಗಳಿಗೆ ಭಕ್ತಿಯ ಆವೇಶದಿಂದ ಕಳೆ ತುಂಬಿದ್ದಾನೆ ಹರಿಹರ ತನ್ನ ರಗಳೆಗಳಲ್ಲಿ. ಇಂಥ ಕಳೆಗೊಂಡ ರಗಳೆಗಳನ್ನೋದಿದ ಪರಿಣಾಮವಾಗಿಯೇ ಈ ನಾಟಕಕಾರನಿಗೆ ಭಕ್ತಿಯ ಆವೇಶ ತುಂಬಿ, ಚೈತನ್ಯ ಚಿಗುರಿ, ಎದೆದುಂಬಿ, ಮನದುಂಬಿ, ಅವನು ಆ ಮಹಾಭಕ್ತರ ಚರಣಕಮಲಗಳಲ್ಲಿ ಸದಾ ಗುಂಯ್‌ಗೂಡುವ ಮರಿದುಂಬಿಯಾಗಿದ್ದಾನೆ. ಆ ಗುಂಜಾರವವೇ ಈ ಏಕಾಂಕ ನಾಟಕ ರೂಪವನ್ನು ಧರಿಸಿದೆ ಎನ್ನಬೇಕು. ವೈರಾಗ್ಯನಿಧಿ ಅಕ್ಕ ಮಹಾದೇವಿಯನ್ನು ಏಕಾಂಕನಾಟಕದಲ್ಲಿ ರೂಪಿಸಿ, ಕನ್ನಡಿಗರಿಗೆ ಪರಿಚಿತರಾದ ಶ್ರೀ. ಮಲ್ಲಿಕಾರ್ಜುನನ ಕುಂಚೀ ಈ ಭಕ್ತಿಪರ ಬಿಜ್ಜಮಹಾದೇವಿಯ ನಾಟಕಕ್ಕೆ ಬಣ್ಣ ಬಳೆದಿದೆ. ಮುಗ್ಧ ಭಕ್ತರ ಮುಗ್ಧ ನಾಟಕವಾದರೂ, ಇಲ್ಲಿ ಬುದ್ಧಿಗೆ ಬೆಳಕು ಲಭಿಸುವುದಲ್ಲದೆ ವೈರಾಗ್ಯಕ್ಕೆ ದಾರಿಯೂ ಸಿಗಬಹುದು. ಒಟ್ಟಿನಲ್ಲಿ ಈ ಚಿಕ್ಕ ನಾಟಕವು ಭಕ್ತಿ, ಜ್ಞಾನ, ವೈರಾಗ್ಯಗಳ ಸುಂದರ ಸಂಗಮವಾಗಿದೆ. ಅಂತೆಯೇ ಪ್ರೇಕ್ಷಕರ ಮುಂದೆ ಎದ್ದು ನಿಲ್ಲುತ್ತದೆ.

'ಬಿಜ್ಜಮಹಾದೇವಿ' ನಾಟಕವನ್ನು ಓದಿ, ಹಾಗೂ ರಂಗಭೂಮಿಯ ಮೇಲೆ ಅಭಿನಯಿಸಿದ್ದನ್ನು ನೋಡಿ ಆನಂದಪಟ್ಟ ಪರಿಣಾಮವಾಗಿ ಅಭಿಪ್ರಾಯ ರೂಪದಿಂದ ಕೆಳಗಿನ ಒಂದೆರಡು ಮಾತುಗಳನ್ನು ಓದುಗರ ಹಾಗೂ ಪ್ರೇಕ್ಷಕರ ಗಮನಕ್ಕೆ ತರಲು ಬಯಸುತ್ತೇನೆ.

ಶಿವನಿಗೆ ತಾಯಿ ಇಲ್ಲ. ಶಿವನು ಪರದೇಶಿ. 'ಪಾಪ! ಲೋಕದ ತಂದೆಗೆ ತಾಯಿ ಇಲ್ಲವಲ್ಲಾ' ಎಂದು ಯಾರಾದರೂ ಚಿಂತಿಸಿದ್ದಾರೆಯೇ? ಈ ಸತ್ಯಸ್ಯ ಸತ್ಯ ಸಂಗತಿಯು ಯಾರನ್ನಾದರೂ ಬೆಪ್ಪುಗೊಳಿಸಿದೆಯೇ? ಈ ಚಿಂತೆಯೇ, ಈ ಅಚ್ಚರಿಯೇ ಈ ನಾಟಕದ ಸೂತ್ರವಾಗಿದೆ. ಶಿವನ ಬಗೆಗಿದ್ದ ಚಿಂತೆಯೇ ನಾಟಕಕ್ಕೊಂದು ಕಾಂತಿಯನ್ನಿತ್ತಿದೆ. ಈ ವೈಚಿತ್ರ್ಯವೇ

ಈ ನಾಟಕಕ್ಕೆ ನಾವೀನ್ಯತೆಯನ್ನು ತಂದುಕೊಟ್ಟಿದೆ. ಅದುವೇ ಆ ಮಹಾ ತಾಯಿ ಬಿಜ್ಜಮಹಾದೇವಿಯ ಭಕ್ತಿಗೆ ಮೂಲವಾಗಿದೆ. ಈ ಮಹಾದೇವಿ ಆ ಮಹಾದೇವನನ್ನು ಕಾಣಲು ಇಚ್ಛಿಸುತ್ತಾಳೆ. ಹಂಬಲಿಸುತ್ತಾಳೆ. ಶಿವನ ಜಡೆಯ ಹಿಕ್ಕನ್ನು ಬಿಡಿಸಬಯಸುತ್ತಾಳೆ. ಎಣ್ಣೆ ಹಚ್ಚಿ ಶಿವನನ್ನು ಎರೆಯಬೇಕೆನ್ನುತ್ತಾಳೆ. ತಾಯಿ ಇದ್ದಿದ್ದರೆ.... ಎಂದು ಉಸಿರ್ಗರೆಯುತ್ತ ಅವನ ಕನವರಿಕೆಯಲ್ಲಿಯೇ ನಿದ್ರೆ ಹೋಗುತ್ತಾಳೆ. ಕನಸಿನಲ್ಲಿ ಪರಮಾತ್ಮ ಪ್ರಸನ್ನನಾಗುತ್ತಾನೆ. ಪಾರ್ವತಿಯನ್ನುದ್ದೇಶಿಸಿ 'ಭೂಲೋಕದಲ್ಲಿಯೂ ಎಂಥ ಸ್ತ್ರೀಯರಿದ್ದಾರೆ ಕಂಡೆಯಾ ?' 'ಇದು ವರೆಗೆ ನನಗಾರೂ ಕಂದಾ ಎಂದು ಕರೆದವರಿಲ್ಲ' ಇಂಥ ಹಲವಾರು ಮಾರ್ಮಿಕ ಮಾತುಗಳಿಂದ ನಾಟಕಕಾರನು ಪ್ರೇಕ್ಷಕರನ್ನೂ, ಓದುಗರನ್ನೂ ತನ್ನ ವಿಶ್ವಾಸಕ್ಕೆ ಒಳಪಡಿಸಿ ಕೊಳ್ಳುತ್ತಾನೆ. ಅಂತೆಯೇ ಸಾಹಿತ್ಯ ಜೀವನದ ಪಡಿನೆಳಲಾಗುತ್ತದೆ. ಕಾಡಿನಲ್ಲಿ ಹೊರಟಾಗ ಮಹಾಶಿವಶರಣೆ ಮಹಾದೇವಿಯಕ್ಕನ ಅಧ್ಯಾತ್ಮ ಜೀವನ ನೆನಪಾಗುತ್ತದೆ. ಅಂಥ ಸನ್ನಿವೇಶಗಳಲ್ಲಿ ಅಕ್ಕನ ವಚನಗಳನ್ನು ಬಳಸಿದ್ದರಿಂದ ನಾಟಕಕ್ಕೆ ಹೊಸತನ ಬಂದೊದಗಿದೆ. 'Old wine in new bottle' ಎಂಬಂತೆ ಹಳೆಯ ಕತೆಗೆ ಹೊಳಪು ಕೊಟ್ಟು ಭಕ್ತಿಗೆ ಬಣ್ಣ ಬರಿಸಿದ್ದಾನೆ ನಾಟಕಕಾರ.

ಬೀದಿಯ ಹೆಂಗಳೆಯರು ಅಮ್ಮಕ್ಕನೊಡನೆ ಮಾತನಾಡುವ, ಹಾಸ್ಯಮಯ ಸನ್ನಿವೇಶವು ಸಹಜ ಶೈಲಿಯಲ್ಲಿ ಚಿತ್ರಿತವಾಗಿದ್ದು ನಿತ್ಯ ಜೀವನವೇ ಪ್ರೇಕ್ಷಕರ ಕಣ್ಮುಂದೆ ಕಟ್ಟಿದಂತಾಗುತ್ತದೆ. ಕಾಡಿನಲ್ಲಿ ಕಾಣದ ಕೂಸಿನ ಧ್ವನಿಯನ್ನಷ್ಟೇ ಕೇಳುತ್ತಿದ್ದಾಗ ಅಮ್ಮಕ್ಕನ ಆತುರತೆ, ಗಡಿಬಿಡಿ, ಆಕೆಯ ಹಂಬಲವನ್ನು ನೋಡಬೇಕು. ಕೊನೆಗೆ ಕೂಸು ಸಿಕ್ಕಾಗ, ತನ್ನ ತೋಳ ತೊಟ್ಟಿಲಲ್ಲಿಟ್ಟು ಲಲ್ಲಿಗೈಯುತ್ತಿರುವಾಗ ಆದ ಅಮ್ಮಕ್ಕನ ಮೇರೆ ಇಲ್ಲದ ಆನಂದವನ್ನೂ ನೋಡಬೇಕು ಆ ತಾಯಿ ಮಗುವಿನ ಆನಂದದಲ್ಲಿ ಉಬ್ಬಿ ಕೊಬ್ಬಿ ನಲಿದಾಡುತ್ತಾಳೆ. ಶರಣರನ್ನು ಕಂಡಾಗ ಬಸವಣ್ಣನವರಿಗಾದ ಆನಂದವನ್ನು ಅನುಭವಿಸಿದ ನಾಟಕಕಾರನು 'ಸಸಿಯ ಮೇಲೆ ಸಾಗರವು ಹರಿದಂತಾಯಿತ್ತು' ಎಂಬ ಅಣ್ಣನ ವಚನವನ್ನು ಸಮರ್ಪಕವಾಗಿ ಬಳಸಿದ್ದಾನೆ.

ಆಯಾ ಸನ್ನಿವೇಶಗಳಲ್ಲಿ ಬಿಜ್ಜ ಮಹಾದೇವಿಯ ಮಾತುಗಳು ಉದ್ದುದ್ದ ವಾಗಿ ಬೆಳೆದರೂ ಭಾವನೆಗಳ ಸ್ಪಷ್ಟತೆಗೆ ಅವಶ್ಯವೆನಿಸಿದ್ದರಿಂದ ಬೇಸರವೆನಿ ಸುವುದಿಲ್ಲ.

ಮಹಾದೇವಿ ಮನೆಗೆ ಬರುತ್ತಾಳೆ. ಮಗುವಿನ–ಶಿವನ–ಲಾಲನೆ ಪಾಲನೆ ಮಾಡುವಾಗ ನಾಟಕಕಾರನ ಹಿಗ್ಗು ಹಿಡಿಸಲಾರದಾಗಿದೆ. ಓದು ಗರಿಗೂ ಪ್ರೇಕ್ಷಕರಿಗೂ ಅಂಥ ತಾಯಿಯ ಕೈಯಲ್ಲಿ ಪಾಲನ ಪೋಷಣ ಪಡೆಯುವ ಭಾಗ್ಯಕ್ಕಾಗಿ ಹಂಬಲಿಸುವಂತಾಗುತ್ತದೆ. ಅಷ್ಟೊಂದು ತನ್ಮ ಯತೆ ಕಂಡು ಬರುವುದನ್ನು ನೋಡಿದರೆ ಅದುವೆ ನಾಟಕಕಾರನಲ್ಲಿರಬೇಕಾದ ಮುಖ್ಯ ಗುಣವೆಂದೆನಿಸುತ್ತದೆ.

ಕೊನೆಯ ದುರಂತ ಚಿತ್ರವು ಎಂಥ ಕಲ್ಲೆದೆಯನ್ನೂ ಕರಗಿಸುವಂತಿದೆ. ಕೂಸಿಗೆ ಬಾಲಗ್ರಹ ರೋಗವಾಗಿದೆ. ತಾಯಿಯ ದುಃಖಕ್ಕೆ ಮೇರೆ ಇಲ್ಲ ದಾಗಿದೆ. ಶಿವನನ್ನು ಕಾಡಿನಿಂದ ನಾಡಿಗೆ ತಂದದ್ದಕ್ಕಾಗಿ ತನ್ನನ್ನೇ ತಾನು ಶಪಿಸಿಕೊಳ್ಳುತ್ತಾಳೆ ಆ ಮಹಾತಾಯಿ. ನಿರಾಶೆಯ ಕತ್ತಲೆ ಕವಿದಂತಾಗಿ ಆತ್ಮಹತ್ಯ ಮಾಡಿಕೊಳ್ಳುವ ಮನಸ್ಸು ಮಾಡುತ್ತಾಳೆ. ಈಳಿಗೆಯಿಂದ ಶಿರಸ್ಸನ್ನು ಹೊಡೆದುಕೊಳ್ಳುವುದರಲ್ಲಿರುತ್ತಾಳೆ. ಅಷ್ಟರಲ್ಲಿ ಪರಮಾತ್ಮ ಪ್ರತ್ಯಕ್ಷನಾಗುತ್ತಾನೆ. ಪುತ್ರರತ್ನವನ್ನು ದಯಪಾಲಿಸುತ್ತಾನೆ.

ಆ ಮಹಾದೇವಿ ಜಗದ ಮಹಾತಾಯಿಯಾಗಿ ವಚನಗಾಯನ ಮಾಡುತ್ತ ಕೂಸನ್ನು ಮುದ್ದಾಡುತ್ತಾಳೆ. ಪ್ರೇಕ್ಷಕರು ಕಟ್ಟಿದ ಉಸಿರನ್ನು ಬಿಟ್ಟು ಮೈಬಿಚ್ಚಿ ಮಹಾಭಕ್ತೆ ಮಹಾದೇವಿಗೆ ಕೈಜೋಡಿಸಿ ಶರಣುಗೈ ಯುತ್ತಿರುವಾಗಲೇ ಪರದೆ ಮುಚ್ಚುವುದು.

ಈ ರೀತಿ ಮಹಾದೇವಿ ಶಿವನ ತಾಯಿಯಾದರೆ, ನಾಟಕಕಾರ ಮಲ್ಲಿಕಾರ್ಜುನನು ಪ್ರೇಕ್ಷಕರ ಮನಂಬುಗುವ ಸುಲಭಶೈಲಿಯಲ್ಲಿ ಚಿತ್ರಿಸಿದ ಕಾರಣವಾಗಿ ಆ ಮಹಾದೇವಿಯ ಜನಕನಾಗಿದ್ದಾನೆ. ಮಲ್ಲಿಕಾರ್ಜುನನ ಕೈಯಲ್ಲಿ ಮಹಾದೇವಿಗೆ ಹೊಸ ರೂಪು ಬಂದಿದೆ. ಹೊಸ ಕಳೆ ಕಟ್ಟಿದೆ. ಅಂತೆಯೇ ಒಮ್ಮೆ ಓದಲು ಆರಂಭಿಸಿದರೆ ಕೊನೆಯ ಅಂಕವನ್ನು ಮುಗಿ ಸುವವರೆಗೂ ಪುಸ್ತಕವನ್ನು ಕೆಳಗಿಡಲು ಮನಸ್ಸಾಗದು.

ತುದಿ ಮೊದಲ್ಗೊಂಡು ನಾಟಕವನ್ನು ಕರುಣಾರಸದಲ್ಲಿ ಅದ್ದಿ ತೆಗೆ ದಂತಿದೆ. ವಚನಗಳಿಂದ ಒಂದು ತೆರನಾದ ತಾರತಮ್ಯಜ್ಞಾನ ಲಭಿಸು ವಂತಾಗಿದೆ. ಹಾಸ್ಯಮಯ ಸನ್ನಿವೇಶಗಳಿಂದ ನಾಟಕವು ಜನಜೀವನಕ್ಕೆ ಸಮೀಪ ಬಂದಿದೆ. ಪರಮಾತ್ಮ ನೆಲಕ್ಕಿಳಿದಿದ್ದಾನೆ. ತಾಯಿಯ ಕೂಸಾಗಿ ದ್ದಾನೆ. ರೋಗ ಬರುತ್ತದೆ. ತಾಯಿ ಮೊರೆಯಿಡುವಾಗ ನಾಟ್ಯವಿಡಂಬನೆ ಯಿಂದ ಒಂದು ತೆರನಾದ ಉಬ್ಬು ವೈಚಿತ್ರ್ಯಗಳು ಉಂಟಾಗಿ ಪ್ರೇಕ್ಷಕರ ಮೈಯಲ್ಲಿ ರೋಮಾಂಚನಗಳೇಳುತ್ತವೆ.

ಒಟ್ಟನಮೇಲೆ ಈ ಏಕಾಂಕ ನಾಟಕವು ಓದಲು, ಸಾಲೆ, ಸಾಹಿತ್ಯ ಸಮಾರಂಭಗಳಲ್ಲಿ ಅಭಿನಯಿಸಲು ತಕ್ಕದ್ದಾಗಿದೆ. ಶ್ರೀ. ಲಕ್ಮೆಯವರು ಇಂಥ ಹಲವಾರು ಕೃತಿಗಳನ್ನು ರಚಿಸಲಿ! ಜನತೆ ಸ್ವಾಗತಿಸಲಿ! ಎಂದು ಹಾರೈಸುವೆ!

ಜಯ-ಗುರುದೇವ!

ಶ್ರೀ. ಸಂಗಮೇಶ್ವರ (ಕೊಂಗವಾಡ).

# ಪಾತ್ರ ಪರಿಚಯ.

ಮೊದಲು ಸಲ ಈ ನಾಟಕವನ್ನು ಬೆಳಗಾವಿಯ ಕನ್ನಡ ಹೆಣ್ಣು ಮಕ್ಕಳ ೨ನೇ ನಂಬರ ಶಾಲೆಯ ವಿದ್ಯಾರ್ಥಿನಿಯರು ದಿ. ೨೫-೪-೧೯೫೫ ನೇ ದಿನ ಬೆಳಗಾವಿಯ ಬಸವಜಯಂತ್ಯುತ್ಸವದ ಪರವಾಗಿ ಲಿಂಗರಾಜ ಕಾಲೇಜದ ರಂಗ ಮಂಟಪದ ಮೇಲೆ ಅತ್ಯುತ್ತಮ ರೀತಿಯಿಂದ ಅಭಿನಯಿಸಿ ಯೋಗ್ಯ ಬಹುಮಾನವನ್ನು ಪಡೆದಿದ್ದಾರೆ.

## ಪಾತ್ರಗಳು.

| | | |
|---|---|---|
| ೧ | ಬಿಜ್ಜಮಹಾದೇವಿ (ಅಮ್ಮಕ್ಕ) | —ಕು. ಮುಂಗರವಾಡಿ |
| ೨ | ಸನ್ಯಾಸಿ | — ,, ಧಾರೇಶ್ವರ |
| ೩ | ಪರಮೇಶ್ವರ | — ,, ,, |
| ೪ | ಪಾರ್ವತಿ | — ,; ದೇಶಪಾಂಡೆ |
| ೫ | ಗಂಗಮ್ಮ | — ,, ,, |
| ೬ | ಕೃಷ್ಣಕ್ಕ | — ,, ಧಾರೇಶ್ವರ |
| ೭ | ರಂಗಮ್ಮ | — ,, ಕಲಘಟಗಿ |
| ೮ | ಯಮುನಕ್ಕ | — ,, ಬಾರೀಮನಿ |
| ೯ | ಕಲ್ಲಕ್ಕ | — ,, ಸಂಗಣ್ಣವರ |

ನಿರ್ದೇಶಕರು:

ಶ್ರೀಮತಿ ಅಂಬವ್ವಕ್ಕ ಗರಗ.

,, ಸರಸ್ವತಿದೇವಿ ಪವಾರ.



# ಬಿಜ್ಜಮಹಾದೇವಿ



## ಹಿನ್ನೆಲೆ.

" ಬಿಜ್ಜಾವರ ಊರು. ಭಾಗೀರಥಿ ಮತ್ತು ಶಂಕರಪ್ಪ ಎಂಬವರು ಶೈವ ಬ್ರಾಹ್ಮಣ ದಂಪತಿಗಳು. ಯಾವಾಗಲೂ ಶಿವನನ್ನೇ ಹಾಡಿ ಬೇಡಿ ಕಾಡುತ್ತಿದ್ದ ಆ ಶಿವಭಾವ ಸಂಪನ್ನರಾದ ದಂಪತಿಗಳಿಗೆ ಮಕ್ಕಳಿಲ್ಲದುದು ದೊಡ್ಡದೊಂದು ಚಿಂತೆ. 'ದೇವಾ! ಮಗಳನ್ನಾದರೂ ಕರುಣಿಸು' ಎಂದು ಬೇಡಿದುದೂ ಉಂಟು. ಕೊನೆಗೊಮ್ಮೆ ಶಿವನು ಅವರ ಭಕ್ತಿಭಾವಕ್ಕೆ ಮೆಚ್ಚಿ ಹೆಣ್ಣು ಮಗಳನ್ನು ದಯೆಪಾಲಿಸಿದನು. ಅವಳೇ ಈ ಬಿಜ್ಜಮಹಾದೇವಿ. ಇವಳ ತೊಟ್ಟಿಲ ಹೆಸರು 'ಮಹಾದೇವಿ' ಎಂದಿದ್ದರೂ ಅಚ್ಚೆಯಿಂದ 'ಅಮ್ಮಕ್ಕ' ಎಂದೂ ಕರೆಯುತ್ತಿದ್ದರು. ಇವಳು ಬಿಜ್ಜಾವರದಲ್ಲಿ ಜನ್ಮವೆತ್ತಿದುದರಿಂದ 'ಬಿಜ್ಜಮಹಾದೇವಿ' ಎಂಬ ಹೆಸರಿನಿಂದ ಖ್ಯಾತಳಾಗಿದ್ದಾಳೆ.

ತಾಯಿ – ತಂದೆಗಳಂತೆ ಅಮ್ಮಕ್ಕನವೂ ದೇವರಲ್ಲಿ ಅಧಿಕ ನಿಷ್ಠೆ. ಯಾವಾಗಲೂ ದೇವರ ಸಾನಿಧ್ಯದಲ್ಲಿಯೇ ಇರಲು ಇಚ್ಛೆಯುಳ್ಳವಳು. ಬಾಲ್ಯಾವಸ್ಥೆಯನ್ನು ಮೀರಿ ಯೌವನದಲ್ಲಿ ಕಾಲಿಕ್ಕುತ್ತಾಳೆ. ಸಾಂಪ್ರದಾಯಕವಾಗಿ ತಂದೆ-ತಾಯಿಗಳು ತಮ್ಮ ಸೋದರಳಿಯನಿಗೇ ಮಗಳನ್ನು ಕೊಟ್ಟು ವಿವಾಹ ಮಾಡುತ್ತಾರೆ. ಆವರೇನು ? .... ಪಾಪ! .... ಬಿಜ್ಜಮಹಾದೇವಿಯು ಮದುವೆಯಾದ ಕೆಲ ಕಾಲದಲ್ಲಿಯೇ ವಿಧವೆ ಆಗುವ ಪ್ರಸಂಗ ಬಂದೊದಗುತ್ತದೆ. .... ಮುತ್ತೈದೆತನಕ್ಕೆ ಮರಣ ಸೋಂಕಿತು. ... ಹೊಟ್ಟೆಯ ಪಾಡಿಗಾಗಿ ಮಾಡಬೇಕಿನ್ನೇನು ? .... ವಿಧವೆ! ...... ತವರೂರಿಗೆ ಹೋದರೆ ಸಲ್ಲದು. ಮನೆಯಲ್ಲಿಯೇ ಕುಳಿತರೆ ನಡೆಯದು. ಹೇಗಾದರೂ ಏನಾದರೂ ಮಾಡಲೇಬೇಕಲ್ಲ! ಕೈಕೂಲಿಗಾಗಿ ಕಾದು-ಕಾದು ಕೊನೆಗೊಮ್ಮೆ ಕದಿರು ಕಾಯಕದಲ್ಲಿ ತೊಡಗುತ್ತಾಳೆ. 'ಕಾಯಕವೇ

ಕೈಲಾಸ' ವೆಂದು ಸಂಬುತ್ತಾಳೆ. ಖಾದಿಯೇ ಅವಳಿಗೆ ಸ್ವರ್ಗದ ಹಾದಿ ಯಾಗುತ್ತದೆ.

ಕಾಯಕನಿಷ್ಠಳಾದ ಬಿಜ್ಜಮಹಾದೇವಿಯನ್ನು ಪರೀಕ್ಷಿಸುವ ಕಾಲ ಸನ್ನಿಹಿಸಿತು. ರುದ್ರಲೋಕದ ಸನ್ಯಾಸಿಯ ಆಗಮನವೇ ಅವಳ ಭಕ್ತಿಯ ಭಾವವನ್ನು ಕೆರಳಿಸಿತೆನ್ನಬಹುದು

ಎಂದಿನಂತೆ ಬಿಜ್ಜಮಹಾದೇವಿ ಕಾಯಕನಿರತಳಾಗಿದ್ದಾಳೆ. ರಾಟಿ ಕಾಯಕವಿಡಿದು ಕೈಲಾಸ ಕಾಣುವ ಅವಳ ಮುಗ್ಧಭಾವ ಘುಂದೋರುತ್ತದೆ. ರಾಟಿ ತಿರುಗಿಸುತ್ತ-ತಿರುಗಿಸುತ್ತ ಹಾಡುತ್ತಿರುತ್ತಾಳೆ." ಇಲ್ಲಿಂದ ಮುಂದೆ ಈ ಏಕಾಂಕ ನಾಟಕ ಪ್ರಾರಂಭವಾಗುತ್ತದೆ.



# ೧ನೆಯ ದೃಶ್ಯ.

ಸ್ಥಳ:—ಬಿಜ್ಜ ಮಹಾದೇವಿಯ ಮನೆ

[ ಸಣ್ಣ ಮನೆ. ಅದಕೊಂದು ಕಟ್ಟೆ. ಕಟ್ಟೆಯ ಮೇಲೆ ಅಮ್ಮಕ್ಕ ಕುಳಿತಿದ್ದಾಳೆ. ವಿಧವೆ. ಹೊಟ್ಟೆಯ ಪಾಡಿಗಾಗಿ ಪತಿಯ ಮರಣಾನಂತರ ಕದಿರು ಕಾಯಕದಲ್ಲಿ ತೊಡಗಿದ್ದಾಳೆ. ಸುತ್ತುಮುತ್ತಲೂ ಹಂಜಿ, ಕುಕ್ಕಡಿಗಳ ರಾಶಿ. ನೂಲು ತೆಗೆಯುತ್ತ-ತೆಗೆಯುತ್ತ ಆಗಾಗ ಹಾಡುತ್ತಿರುತ್ತಾಳೆ ]

ಬಿಜ್ಜಮಹಾದೇವಿ:—

ರಾಟೆಯ ತಿರುಗಿಸುವೆ | ನಾನಿಂದು
ರಾಟೆಯ ತಿರುಗಿಸುವೆ ॥ ಪಲ್ಲ ॥
ರಾಟೆ-ಮೋಟೆಗಳೆರಡು |
ಕೋಟಿ ವಿದ್ಯೆಕೆ ಮೇಲು |
ರಾಟೆ ಕಾಯಕವಿಡಿದು | ಕೈಲಾಸ ಕಾಣುವೆ ॥ ೧ ॥
ರಾಟೆ-ಧಾಟಿಯ ಹಿಡಿದು |
ಹಾಡುವೆ ಪಾಡುವೆ |
ರಾಟೆಯ ಸಂಗೀತ | ಜೀವನದ ಸಂಗೀತ ॥ ೨ ॥
ಹಸನಾದ ಮನದಲ್ಲಿ |
ಹೃದಯ ಮಂದಿರದಲ್ಲಿ |
ಹರನನ್ನೇ ಪೂಜಿಸಿ | ಹರಗೆ ಕೈ ಜೋಡಿಸಿ ॥ ೩ ॥
ಮೇಲೊಮ್ಮೆ ಕೆಳಗೊಮ್ಮೆ |
ಏಳುವುದು ಬೀಳುವುದು |
ಕಟ್ಟಿಗೆಯ ತುಂಡಲ್ಲ | ಭಾಗ್ಯ ಚಕ್ರವಿದು ॥ ೪ ॥

( ಆನಂದದಿಂದ ಕಾಯಕದಲ್ಲಿ ತಲ್ಲೀನಳಾಗಿದ್ದಾಳೆ. ಆದರೂ ಪತಿ ಇಲ್ಲದ ಸತಿಗೆ ಆನಂದವೆಲ್ಲಿಯದು ? .... ವೈಧವ್ಯಕ್ಕಾಗಿ ಮರಗುತ್ತಾಳೆ. ಬಂಜೆತನದ ಬವಣೆಗಾಗಿ ಶೋಕಿಸುತ್ತಾಳೆ. ಕಡೆಗೊಮ್ಮೆ 'ಕಾಯಕವೇ ಕೈಲಾಸ' ಅದುವೇ 'ಜೀವನದ ಸರ್ವಸ್ವ' ಎಂದರಿತು ಕಾಯಕನಿರತಳಾಗುತ್ತಾಳೆ. )

**ಬಿಜ್ಜಮಹಾದೇವಿ:**—( ನೂಲುವದನ್ನು ನಿಲ್ಲಿಸಿ, ಸ್ವಗತ) ಹಾಯ್!.... ವಿಧಿಯು ಮುಳಿಸೇ! .... ನನ್ನನ್ನು ವಿಧವೆಯನ್ನಾಗಿ ಮಾಡಿದಿಯಾ!.... ಚಿಕ್ಕಂದಿನಲ್ಲಿಯೇ ಪತಿಯನ್ನು ಅಗಲಿಸಿದೆಯಾ? .... ತುತ್ತು ಕೂಳಿಗಾಗಿ ಕಾತರಿಯುವಂತೆ ನನ್ನನ್ನು ಈ ದುಃಖಕ್ಕೀಡು ಮಾಡಿದೆಯಾ?....ನಿನಗಾಗಿ ನಾನು ಯಾವ ಅಪರಾಧ ಮಾಡಿರುವೆ? .... ಶಿವಶಿವಾ! .... ( ನಿಟ್ಟುಸಿರಿಟ್ಟು ) ನನ್ನ ಹಣೆಬರಹಕ್ಕೆ ಒಂದು ಕೂಸನ್ನಾದರೂ ಕೊಟ್ಟು ನನ್ನನ್ನು ಸಾರ್ಥಕಗೊಳಿಸಬಾರದಿತ್ತೇ? ....ಮುದವನರಿಯದ ತಾಯಿಗೆ ಬೇನೆಯನರಿಯದ ಬಂಜೆಗೆ ಆವ ಸುಖ? .... ಹೇ ದೇವ! .... ಕಂದನಿಲ್ಲದ ಬಾಳು ಹಾಳು ಬಾಳು! ........!

( ಅಷ್ಟರಲ್ಲಿ ರುದ್ರಲೋಕದಿಂದ ಓರ್ವ ಸನ್ಯಾಸಿಯು ಬರುತ್ತಾನೆ. ಬಿಜ್ಜಮಹಾದೇವಿಯ ಬಾಗಿಲಿಗೆ ಭಿಕ್ಷೆಗಾಗಿ ಬರುತ್ತಾನೆ. ಮುಖದ ಕಳೆ ತೇಜೋಮಯವಾಗಿದೆ. ಸನ್ಯಾಸಿಗೆ ತಕ್ಕಂತೆ ವೇಷ. ಬಗಲಲ್ಲಿ ಕೃಷ್ಣಾಜಿನದ ಸುರುಳಿ. ಕೈಯಲ್ಲಿ ಕಮಂಡಲು. ರುದ್ರಾಕ್ಷಿಗಳೇ ಅವನ ಆಭರಣಗಳು. )

**ಸನ್ಯಾಸಿ:**—( ಒಳಗೆ ಪ್ರವೇಶಿಸುತ್ತ, ಸ್ವಗತ) ಓಂ ನಮಃ ಶಿವಾಯ.... ಓಂ ನಮಃ ಶಿವಾಯ .... ( ಪ್ರಕಾಶ) ಭಿಕ್ಷಾಂದೇಹಿ!....

**ಬಿಜ್ಜಮಹಾದೇವಿ:**—( ಸ್ವಗತ) ಅವ್ವಾ! ಯಾರೋ ಸನ್ಯಾಸಿಗಳು! ಶಿವಶಿವಾ! ಇವರ ತೇಜಸ್ಸು ನೋಡಿದ ಕಣ್ಣುಗಳಿಗೆ .... ಇವರ ವಾಣಿಯನ್ನು ಕೇಳಿದ ಕಿವಿಗಳಿಗೆ ಹಬ್ಬವುಂಟಾಗುತ್ತಿದೆಯಲ್ಲ! ನನಗೆಷ್ಟು ಆನಂದ! ಕಣ್ಣಿಲ್ಲದವರಿಗೆ ಕಣ್ಣು ಬಂದಂತಾಯಿತು. ( ಅವರನ್ನು ನೋಡುತ್ತ ಹೋ! ಹೋ! ಆ ಪರಮಾತ್ಮನೇ ಅವತರಿಸಿ ಬಂದಂತೆ ಕಾಣುವುದು. ಯಾರೇ ಇರಲಿ! ಅವರನ್ನು ಒಳಗೆ ಬರಮಾಡಿಕೊಂಡು ಸತ್ಕರಿಸುವೆನು. (ಎದ್ದು, ಪ್ರಕಾಶ)

ಶರಣು ! ಅಯ್ಯಗಳೇ ! ಒಳಗೆ ದಯಮಾಡಿಸಬೇಕು. ಬಡವರ ಮನೆಗೆ ಭಾಗ್ಯನಿಧಿ ಬಂದಂತಾಗಿದೆ.

**ಸನ್ಯಾಸಿ:**—(ನಸುನಗೆಯಿಂದ) ಅಮ್ಮಾ ! ತಥಾಸ್ತು ! (ಬಗಲಲ್ಲಿದ್ದ ಕೃಷ್ಣಾಜಿನದ ಸುರುಳಿ ಬಿಚ್ಚಿ, ಹಾಸಿ ಕುಳಿತುಕೊಳ್ಳುತ್ತಾರೆ. )

**ಬಿಜ್ಜಮಹಾದೇವಿ:**—(ನಮ್ರದಿಂದ) ಅಯ್ಯನವರೇ ! ತಾವು ಎತ್ತಲಿಂದ ಬಿಜಯಂಗೈದಿರಿ ?

**ಸನ್ಯಾಸಿ:**— ಅಮ್ಮಾ ! ನಾವೇನು ಸಮೀಪದ ಸನ್ಯಾಸಿಗಳಲ್ಲ. ಭಾಳಲೋಚನನ ಭಕ್ತರು. ದೇಶಾಂತರಿಗಳು. ನೋಡಮ್ಮಾ ! ಆ ರುದ್ರಲೋಕದಿಂದ ಇಲ್ಲಿಗೆ ಬರೋಣವಾಯಿತು.

**ಬಿಜ್ಜಮಹಾದೇವಿ:**—ಹಾ ! ( ಸ್ವಗತ ) ರುದ್ರಲೋಕ ! ರುದ್ರಲೋಕದವರೇ ! ( ಪ್ರಕಾಶ ) ಅಯ್ಯಗಳೇ ರುದ್ರಲೋಕವೆಂದರೆ ಯಾವದು ? ರುದ್ರನೆಂದರೆ ಯಾರು ? ಹೇಗಿದ್ದಾರೆ ಅಯ್ಯಗಳೇ!

**ಸನ್ಯಾಸಿ:**— ಅಮ್ಮಾ ! ರುದ್ರನೆಂದರೆ ಯಾರು ಗೊತ್ತಿಲ್ಲವೇ? ಅವನೆಂದರೆ ಜಗದೊಡೆಯ ! ಪರಮಾತ್ಮ !

**ಬಿಜ್ಜಮಹಾದೇವಿ:**—ರುದ್ರನೆಂದರೆ ಪರಮಾತ್ಮನೇ ? ಹಾಗಾದರೆ ? ಅಯ್ಯಗಳೇ ಅವನ ನೀತಿ, ಚಾರಿತ್ರ್ಯಗಳಾದರೂ ಏನು ?

**ಸನ್ಯಾಸಿ:**— ಅಮ್ಮಾ ! ಹೇಳಲೇ ? ಜಗದ್ವಂದ್ಯ ಪರಮಾತ್ಮನ ಚಾರಿತ್ರ್ಯ ಹೇಳಲೇ ? ಅವನ ಕುರುಹು ಹೇಳಲೇ ?

**ಬಿಜ್ಜಮಹಾದೇವಿ:** —ಹೌದು ಅಯ್ಯಗಳೇ, ದಯವಿಟ್ಟು....

**ಸನ್ಯಾಸಿ:**— ಹಾಗಾದರೆ ಕೇಳಮ್ಮಾ. ಆ ಪರಮಾತ್ಮನಿಗೆ ಮೂರು ಕಣ್ಣುಗಳಿವೆ. ಮೂರನೆಯ ಕಣ್ಣು ಹಣೆಯಲ್ಲಿದೆ. ಅದೇ ಉರಿಗಣ್ಣು. ಅಂತೆಯೇ ಆತನನ್ನು ಮುಕ್ಕಣ್ಣನೆಂದು ಕರೆಯುತ್ತಾರೆ. ಜಟಾಧಾರಿಯಾಗಿದ್ದಾನೆ. ಜಡೆಯಿಂದ ಗಂಗೆ ಹರಿಯುತ್ತಾಳೆ.

**ಬಿಜ್ಜಮಹಾದೇವಿ :**— ಏಕೆ ? ನಾವೇ ಅಲ್ಲಿಗೆ ಬರಲು ಅದುಹೇಗೆ ಸಾಧ್ಯ ಅಯ್ಯಗಳೇ ? ಆ ರುದ್ರಲೋಕದಲ್ಲಿ ನಮಗೆ ಪ್ರವೇಶ ದೊರೆಯಲಾರದಲ್ಲವೇ ?

**ಸನ್ಯಾಸಿ:**— ಹಾಗೇನಿಲ್ಲ ತಾಯಿ ! ರುದ್ರಲೋಕವೆಂದರೆ ಎಲ್ಲೆಲ್ಲಿಯೂ ಇದೆ. ಸತ್ಯಪ ನುಡಿವುದೇ ರುದ್ರಲೋಕ ! ನೋಡಮ್ಮ. ಆ ಪರಮಾತ್ಮನು ಎಲ್ಲೆಲ್ಲಿಯೂ ಇದ್ದಾನೆ. ಕಲ್ಲಿನಲಿ, ಮಣ್ಣಿನಲಿ, ಎಳ್ಳಿನ ಗೊನೆಯಲ್ಲಿ, ಮುಳ್ಳಿನ ಕೊನೆಯಲ್ಲಿ ಎಲ್ಲೆಲ್ಲಿಯೂ ಅವನೇ ಇರುವನು. ನೆನೆವವರ ಮನದಲ್ಲಿಯೂ ಇರುತ್ತಾನೆ. ಕಾರಣ ಆ ರುದ್ರಲೋಕವಲ್ಲಿ ಎಲ್ಲ ಭಕ್ತರಿಗೂ ಪ್ರವೇಶ ಇದೆಯಮ್ಮಾ.

**ಬಿಜ್ಜಮಹಾದೇವಿ:**—ಇದೇನಯ್ಯಗಳೇ ನಿಮ್ಮಬುದ್ಧಿ ! ಪರಮಾತ್ಮನು ಅಲ್ಲಿಯೂ ಇಲ್ಲಿಯೂ ಎಲ್ಲೆಲ್ಲಿಯೂ ಹೇಗೆ ಇರುವನು ?

**ಸನ್ಯಾಸಿ:**— ಹೌದಮ್ಮ ! ಎಲ್ಲೆಲ್ಲಿಯೂ ಇದ್ದಾನೆ "ಸರ್ವಂ ಶಿವಮಯಂ ಜಗತ್ " ಎನ್ನುವಂತೆ ಎಲ್ಲ ವಸ್ತುವಿನಲ್ಲಿಯೂ ಶಿವನು ಇದ್ದಾನೆ. ಸರ್ವಾಂತರ್ಯಾಮಿ ಅವನು.

**ಬಿಜ್ಜಮಹಾದೇವಿ:**—ಏನೇ ಆಗಲಿ ಅಯ್ಯಗಳೇ, ನನಗೇನು ಅವನ ಭೆಟ್ಟಿಯಾಗಲಿಕ್ಕಿಲ್ಲ, ನೀವೇ ಕಳ್ಸಿ ಕೊಡಿರಿ.

**ಸನ್ಯಾಸಿ:**— ಈ ವಿಚಾರ ಬಿಟ್ಟುಬಿಡಮ್ಮ ಅವನನ್ನು ಪಡೆದು ನೀನೇನು ಮಾಡುವವಳಿದ್ದೀ ?

**ಬಿಜ್ಜಮಹಾದೇವಿ:**—ಏನು ಮಾಡುವವಳು ? ಹಾಗೆನ್ನಬೇಡಿ ಅಯ್ಯಗಳೇ, ಆ ಪರಮಾತ್ಮನನ್ನು ನನ್ನ ಮನೆಗೆ ಕಳಿಸಿಕೊಡಿರಿ. ನಿಮ್ಮಾನೆಯಾಗಿ ಅವನನ್ನು ರಕ್ಷಿಸುವೆ. ಜಡೆಯ ಹಿಕ್ಕನು ಬಿಡಿಸುವೆ. ಎಣ್ಣೆಹಚ್ಚಿ ಬಾಚಿ ಎರೆಯುವೆನಯ್ಯಗಳೇ. ಕೊರಳಲ್ಲಿ

ಇರುವ ರುಂಡಮಾಲೆಗಳನ್ನು ತಗೆದು ಬಂಗಾರದ ಆಭರಣ ಗಳನ್ನಿಡುವೆ. ಉರಿಗಣ್ಣನ್ನು ತಗೆದು ಅಲ್ಲಿ ಕರಪುರ ತಿಲಕವನ್ನಿಡುವೆ. ಸುಡುಗಾಡದ ತಿರುಗಾಟ ತಪ್ಪಿಸಿ ನನ್ನ ಮನೆಯ ಅಂಗಳದಲ್ಲಿ ತಿರುಗಾಡಿಸಲು ಹಚ್ಚುವೆ. ಹೇಗಾದರೂ ಮಾಡಿ ಕಳಿಸಿ ಕೊಡಿ ಅಯ್ಯಗಳೇ ! ಹೆತ್ತತಾಯಿಗಿಂತಲೂ ಹೆಚ್ಚಿನ ವಾತ್ಸಲ್ಯದಿಂದ ಅವನನ್ನು ನಾನು ಜೋಪಾನ ಮಾಡುವೆ.

**ಸನ್ಯಾಸಿಃ**— ಅವ್ವಾ ನಿನ್ನ ಈ ಛಲವನ್ನು ಬಿಟ್ಟುಬಿಡು. ಕೊನೆಯದಾಗಿ ಒಂದು ಮಾತನ್ನು ಹೇಳುವೆನು ಕೇಳವ್ವ. ಆ ಪರಮಾತ್ಮನು ಸರ್ವಗುಣ ಪರಿಪೂರ್ಣನು. ಸರ್ವವ್ಯಾಪಿಯು. ಭಕ್ತರ ಬಂಧು. ಅದಕ್ಕಾಗಿ ಅವ್ವ ನಿನ್ನ ಮುಗ್ಧ ಭಕ್ತಿಯಿಂದ ಅವನನ್ನು ಒಲಿಸಿಕೊಳ್ಳಬಹುದು. ಹಾಗೆಯೇ ' ಬಾ—ಹೋಗು " ಎಂದರೆ ಸಲ್ಲದವ್ವ ! ಕಾರಣ ತಾಯೀ ! ಇದನ್ನರಿತು ನಿಸ್ಸೀಮನಾದ ಆ ಚೆಲುವನನ್ನು ನಿನ್ನ ಭಕ್ತಿ ವಿಶ್ವಾಸಗಳಿಂದ ಬರಮಾಡಿಕೊಳ್ಳು. ನಾನು ಬಂದು ಬಹಳ ಹೊತ್ತಾಯಿತು. ಹೋಗುವೆ ತಾಯಿ ! ( ಎಂದು ಹಾಸಿದ್ದ-ಮೃಗಚರ್ಮವನ್ನು ಸುತ್ತಹತ್ತುವರು. )

**ಬಿಜ್ಜಮಹಾದೇವಿ:**— ಅಯ್ಯಗಳೇ, ಹೋಗುವಿರಾ ?

**ಸನ್ಯಾಸಿಃ**.— ( ಮೃಗ ಚರ್ಮದ ಸುರುಳಿಯನ್ನು ಬಗಲಲ್ಲಿರಿಸಿಕೊಳ್ಳುತ್ತ ) ಹೋಗುವೆ ತಾಯಿ ! ನಿನ್ನ ಭಕ್ತಿಯ ಭಾವ ಬೆಳೆಯಲಿ! ಶರಣು ! ಶರಣು ! !

**ಬಿಜ್ಜಮಹಾದೇವಿಃ**— ಶರಣು ! ಅಯ್ಯಗಳೇ, ಶರಣು ! ಶರಣು ! ! ಹೋಗಿ ಬರ್ರಿ.

**ಸನ್ಯಾಸಿಃ**— ಓಂ ನಮಃ ಶಿವಾಯ- ( ಸನ್ಯಾಸಿ ತೆರಳುತ್ತಾರೆ. )

**ಅಕ್ಕಮಹಾದೇವಿ:–** ( ವಿಚಾರ ಮಗ್ನಳಾಗಿ, ಸ್ವಗತ ) ಅಯ್ಯೋ ! ನನ್ನಲ್ಲಿ ಆ ಪರಮಾತ್ಮನ ವಿಚಾರವನ್ನು ಹುಟ್ಟಿಸಿ ಹೋಗಿಯೇ ಬಿಟ್ಟಿರಲ್ಲ. .... ಪರಮಾತ್ಮಾ! ನಿನ್ನ ಆ ಕಷ್ಟ ನಷ್ಟಗಳನ್ನು ತೊಡೆದು ಹಾಕುವ ತಾಯಿತನ ನನಗೆ ದಯಪಾಲಿಸಬಾರದೇ? ಬಾ...ದೇವರೇ. ನಾನಾಗಿಯೇ ನಿನ್ನ ಆ ಎಲ್ಲ ತಾಪತ್ರಯಗಳನ್ನು ತೊಳೆದು ಹಾಕುವೆ....ಬಾರಯ್ಯ ಬಾ!. ಏಕೆ? ....ಬರಲಾ-ರೆಯಾ ? ಹಾಗಾದರೆ ....ಮತ್ತೇನು ಬೇಕು? (ವಿಚಾರಿಸುತ್ತ) ಹೂಂ ! ನನ್ನ ಭಕ್ತಿ ಬೇಕೇ ? ಇದೆಯೇ ನನ್ನಲ್ಲಿ.....ದೇವಾ ! ಭಕ್ತಿಯೆಂಬುದ ಮಾಡಲಾಗದು ! ಭಕ್ತಿಯೆಂಬುದ ನೋಡ-ಲಾಗದು ! ಭಕ್ತಿಯೆಂಬುದ ಬಾಳಬಾಯಿಧಾರೆ ! ಶಿವ! ಶಿವಾ! ಏನೇ ಆಗಲಿ ! ನೀನು ನನ್ನಲ್ಲಿಗೆ ಬಂದು ನನ್ನ ಸೇವೆಯನ್ನು ಸ್ವೀಕರಿಸಬಲ್ಲೆಯಾ ?....

( ಅಂಗಲಾಚಿ ಬೇಡಿಕೊಳ್ಳುತ್ತಿರುವಾಗಲೇ

**ಪರದೆ ಮುಚ್ಚುತ್ತದೆ** )



# ೨ನೆಯ ದೃಶ್ಯ.

ಸ್ಥಳ: – ಪಡಸಾಲೆ.

( ಸನ್ಯಾಸಿ ತೆರಳಿದ ಬಳಿಕ ಬಿಜ್ಜವ.ಹಾದೇವಿಯು ಪಡಸಾಲೆಯಲ್ಲಿ ಕುಳಿತಿದ್ದಾಳೆ. ಸುತ್ತುಮುತ್ತಲೂ ಹಂಜಿ, ಕುಕ್ಕಡಿಗಳ ರಾಶಿ. ಕಾಯಕ ಮಾಡುತ್ತಲೇ ನಿನ್ನೆ ಬಂದು ಹೋದ ಅಯ್ಯಗಳನ್ನು ನೆನೆಸಿ ಆ ದೇವನ ಬಗ್ಗೆ ವಿಚಾರ ಮಾಡುತ್ತಿರುತ್ತಾಳೆ. ದೇವನಿಗೆ ತಾಯಿ ನಿಜವಾಗಿಯೂ ಇಲ್ಲ ಎಂದು ತೀರ್ಮಾನಕ್ಕೆ ಬರುತ್ತಾಳೆ. )

**ಬಿಜ್ಜಮಹಾದೇವಿ:**—(ಸ್ವಗತ) ಸತಿಯೂ, ಮಕ್ಕಳೂ, ಹಿತಚಿಂತಕರೂ, ಶಿಷ್ಯರೂ ಇರುವ ಓ ಪರಮಾತ್ಮಾ ! ನಿನಗೆ ನಿಜವಾಗಿಯೂ ತಾಯಿ ಇಲ್ಲವೇ? (ವಿಚಾರಿಸುತ್ತ) ಶಿವನು ಜನ್ಮವೆತ್ತಿದ ಕೂಡಲೆ ಅವನ ತಾಯಿ ಮರಣಹೊಂದಿರಬಹುದಲ್ಲವೇ ?....ಛೇ ! ಛೇ ! ಆ ಅಯ್ಯಗಳು ತಾಯಿಯೇ ಇಲ್ಲವೆಂದರು. ಅಯ್ಯೋ ! ಹಾಗಾದರೆ ಪ್ರೇತಾವಾಸದಲ್ಲಿ ಭೂತಗಳ ಕೂಡ ಸಂಚರಿಸುವ ಶಿವನು ಹೇಗೆ ಜನ್ಮವೆತ್ತಿದನು ? ತನಗೆ ತಾನೇ ಹುಟ್ಟಿ ಬೆಳೆದಿದ್ದಾನೆಯೇ ? ಶಿವನೆ! ನಿನಗೆ ನಿಜವಾಗಿಯೂ ತಾಯಿಯಿಲ್ಲವೇ ? ಇದ್ದಿದ್ದರೆ ತಿರಿದುಣ್ಣುತ್ತಿದ್ದನೇ ? ಕೂದಲು ಜಡೆಗಟ್ಟುತ್ತಿದ್ದವೇ ? ಚಿತಾಭಸ್ಮ ಧರಿಸುತ್ತಿದ್ದನೇ ? ರುಂಡ ಮಾಲೆಗಳನ್ನು ಆಭರಣಗಳನ್ನಾಗಿ ಧರಿಸುತ್ತಿದ್ದನೇ ? .... ಇಲ್ಲ! ಶಿವನಿಗೆ ತಾಯಿ ಇದ್ದಿದ್ದರೆ ಸುಡುಗಾಡದಲ್ಲಿ ತಿರುಗಾಡುತ್ತಿದ್ದಿಲ್ಲ. ತಾಯಿ ಇದ್ದಿದ್ದರೆ ಅವಳ ಕರುಣೆ ವಾತ್ಸಲ್ಯಗಳು ಈ ಪರಿ ನಿಷ್ಠುರವಾಗುತ್ತಿದ್ದಿಲ್ಲ. ಇಲ್ಲಾ. ಶಿವನಿಗೆ ತಾಯಿಯೇ ಇಲ್ಲ. .... ಓ ! ತಾಯಿ ಇಲ್ಲದ ತಬ್ಬಲಿಯೇ; ಪರದೇಶಿ ! ನಿನಗೆದೆಷ್ಟು ಕಷ್ಟಗಳು ! ಮಕ್ಕಳಿಲ್ಲದ ಬಂಜೆ ನಾ.....ಬಾ ಕಂದಾ!

ನನಗೆ ಮಗುವಾಗಿ ಬಾರಯ್ಯ! ಬಾ ಶಿವನೇ ನಿನ್ನ ಕಷ್ಟಗಳನ್ನೆಲ್ಲ ದೂರು ಮಾಡುವೆ, ಬಾರಯ್ಯ ಬಾ! ( ಕಾಯಕದಲ್ಲಿ ನಿರತಳಾದಾಗ ಬಿಜ್ಜ ಮಹಾದೇವಿಯು ನಿದ್ರೆ ಹೋಗುತ್ತಾಳೆ ).

( ಅಷ್ಟರಲ್ಲಿ ಇದೇ ಸುಸಮಯವೆಂದು ಅವಳ ಕರೆಗೆ ಓಗೊಟ್ಟನೋ ಏನೋ ಅನ್ನುವಂತೆ ಅವಳ ಭಕ್ತಿ ಪರೀಕ್ಷೆಗಾಗಿ ಪರಮಾತ್ಮನು ಪಾರ್ವತಿಯೊಂದಿಗೆ ಅವಳ ಕನಸಿನೊಳಗೆ ಪ್ರಸನ್ನನಾಗುತ್ತಾನೆ. )

**ಪರಮೇಶ್ವರಃ**—( ಸಂತೋಷದಿಂದ) ಗಿರಿಜೆ! ಈ ಮಹಾಭಕ್ತಳ ಮುಗ್ಧ ಭಕ್ತಿ ಎಷ್ಟಿದೆ ನೋಡಿದಿಯಾ? ಪರೀಕ್ಷಿಸುವದಕ್ಕೋಸ್ಕರ ಎಂಥ ಸಂಕಟ ಒಡ್ಡಿದರೂ 'ಕಾಯಕವೇ ಕೈಲಾಸ' ವೆಂದು ಯಾವ ರೀತಿಯ ವಿಚಾರದಲ್ಲಿ ಮಗ್ನಳಾಗಿ ನಿದ್ರೆ ಹೋಗಿದ್ದಾಳೆ ನೋಡು. ಭೂಲೋಕದಲ್ಲಿಯೂ ಎಂಥ ಸ್ತ್ರೀಯರಿದ್ದಾರೆ ಕಂಡೆಯಾ? ರಮಣಿ! ನನಗೆ ತಾಯಿಯಾಗುವ ಹಂಬಲ ಅವಳಲ್ಲೆಷ್ಟಿದೆ ನೋಡು! ಇದು ವರೆಗೆ ನನಗಾರೂ ಕಂದಾ ಎಂದು ಕರೆದವರಿಲ್ಲ. ನನ್ನ ದುಃಖಕ್ಕಾಗಿ ಮರುಗಿದ ಮಹಿಳೆಯರಾರಿಲ್ಲ. ಇವಳ ಕೊರಗು — ಇವಳ ದೃಢ ನಂಬಿಗೆ — ಎಷ್ಟಿದೆ ನೋಡು ನನ್ನಲ್ಲಿ! ಯಾವ ರೀತಿಯಿಂದ ನನ್ನ ಸೇವೆಗಾಗಿ ಆತುರಪಡುತ್ತಿದ್ದಾಳೆ. ನೋಡು ದೇವಿ! ಇವಳು ವಿಧವೆ ನಿಜ! ಇವಳ ಇಚ್ಛೆಯನ್ನು ಕೈಗೂಡಿಸಬೇಕಲ್ಲ!

**ಪಾರ್ವತಿ:**—ಹೌದು! ದೇವಾ – ಅವಳು ತನ್ನ ಚಿಕ್ಕ ವಯಸ್ಸಿನಲ್ಲಿಯೇ ವಿಧವೆಯಾದಂತೆ ಕಾಣುವುದು. ಹಾಗಾದಲ್ಲಿ ಅವಳಿಗೆ ಮಗುವಾಗುವುದು ಹೇಗೆ ಸಾಧ್ಯ? ಒಂದು ವೇಳೆ ಮಗುವಾದರೆ ಜನರು ಅಪವಾದ ಹೊರಿಸಬಹುದಲ್ಲ! ....

**ಪರಮೇಶ್ವರ:**—ಹೌದು ದೇವಿ! ಯೋಗ್ಯ ವಿಚಾರ! ಅವಳ ಉದರದಿಂದ ಜನಿಸಿದರೆ ಮಾನವರು ಅವಳನ್ನು ನಿಂದಿಸಿ ಹೊರಗಿಕ್ಕು

ವರು. ದೇವಿ ! ಹಾಗಾದರೆ ( ವಿಚಾರಿಸುತ್ತ ) ಹೂಂ ! ನೋಡು ಆ ಅರಣ್ಯದಲ್ಲಿ ಶಿಶುವಾಗಿ ಇವಳನ್ನೇ ಅಲ್ಲಿಗೆ ಬರ ಮಾಡಿಕೊಂಡರೆ....

**ಪಾರ್ವತಿ:**—ಅವಳು ಅರಣ್ಯಕ್ಕೆ ಬರಬೇಕಾದರೆ ಕಾಕುಳ್ಳ ತರುವ ನೆವವನೊಡ್ಡಿ ಬರುವಂತಾಗಬೇಕು.........

**ಪರಮೇಶ್ವರ:**—ಹೌದು ! ಹೌದು !! ಹಾಗೆಯೇ ಮಾಡತಕ್ಕದ್ದು........ ದೇವಿ ಅವಳ ನಿದ್ರಾವಸ್ಥೆ ಮುಗಿಯುತ್ತ ಬಂದಿದೆ. ಬೇಗ ಅವಳ ಕನಸಿನಲ್ಲಿ ಇದನ್ನು ತಿಳಿಸುವಾ ನಡೆ.

**ಪಾರ್ವತಿ:**— ಹೌದು ! ದೇವಾ, ನಡೆಯಿರಿ. (ಮಾಯವಾಗುವರು).

( ಮಾಯವಾದ ಆ ಬೆಳಕಿನೊಳಗೆ ಮತ್ತೊಂದು ಬೆಳಕು ಬೆಳಗಹತ್ತಿದೆ. ಬಿಜ್ಜಮಹಾದೇವಿ ಸೊಂಯ್ ಎಂಬ ಸಪ್ಪಳದೊಂದಿಗೆ ಕಣಸು ಕಾಣುತ್ತಿದ್ದಾಳೆ )

**" ಮಗನ ಬೇಡಿದೆಯವ್ವಾ ! ಕಾನನದೊಳಹನೆ ಬಾ !**
**ಮಿಗೆ ಕಾಡ ಕುರುಳ ತಹನೆವಳಾಗಿ ನೀನು ಬಾ !**
**ಶಿವನಿನಗೆ ಶಿಶುವಾಗಿ ಬಂದಿಹನೆ ತಾಯಿ ಬಾ !**
**ಭವಹರಂ ಮಗನಾಗಿ ಬಂದಿಹನೆ ಬಾರಮ್ಮ ಬಾ ! "**

( ಒಮ್ಮೆಲೇ ಬಿಜ್ಜಮಹಾದೇವಿ ಎಚ್ಚರಾಗುತ್ತಾಳೆ. )

**ಬಿಜ್ಜಮಹಾದೇವಿ:**— ( ಸ್ವಗತ ) ದೇವ ! ದೇವ ! ಪರಮಾತ್ಮಾ ! ( ಸುತ್ತಲೂ ನೋಡುತ್ತಾಳೆ ).... ಯಾರೂ ಇಲ್ಲ. ....ಅಹಹ ! ಅದೆಂಥ ಕನಸು ಕಂಡೆ ಸರ್ವಾಂತರ್ಯಾಮಿ ಸರ್ವಮಂಗಳೆ ಯರನ್ನು ಕಂಡೆ! ಆದರೆ ಎಲ್ಲಿದ್ದಾರೆ? ಓ ಪರಮಾತ್ಮಾ! ಕನಸಿನಲಿ ಬಂದೆ ಏಕೆ? ಕನಸು ನಿಜವಿರಬಹುದೇ ? ನೀನು ಕಂದನಾಗಿ ಬರುವದು ಸತ್ಯವೇ? ಓ! ಕಂದಾ! ಶಿವನೇ ಭವಹರನೇ ಕಾಡಿನಲ್ಲಿ ಬರುವೆಯಾ ? ಏಕೆ ? ವೈಧವ್ಯಕ್ಕಾಗಿ ಅಂಜಿದಿಯಾ ?

**ರಂಗಮ್ಮ:**—ಇಲ್ಲ ಅಮ್ಮಕ್ಕs ! ನಿನ್ನ ಸಲುವಾಗಿ ನಾ ಏನಾರ ಹೇಳೀ ನೇನು ? ಇರಲಿ ಅಮ್ಮಕ್ಕಾ, ಬಹಳ ಜೋಕಿಲೆ ಹೋಗ ನೋಡು. ಕೆಟ್ಟಪ್ರಾಣಿ ಅಲ್ಲಿ. ತಿಳೀತ್ತs

**ಅಮ್ಮಕ್ಕ:**—ಅದಂತೂ ಆತ ರಂಗಮ್ಮs, ಏನs ಆಗಲಿ ನಾಳೆ ನಾ ಸ್ನಾನ ಮಾಡಿಕೊಂಡು ಹೋಗೆ ಬರ್ತೇನಿ.

**ರಂಗಮ್ಮ:**—ಹೋಗಿ ಬಾರಮ್ಮs ( ಎದ್ದು, ಹೋಗ ಹತ್ತುವಳು, ಮತ್ತೆ ಹಿಂತಿರುಗಿ) ಅಯ್ಯ ! ನಾ ಬಂದ ಕೆಲಸಾನs ಮರತ್ಸಿ ನೋಡ್ಸ. ಅಲ್ಲs, ಮತ್ತs ನಾಳೆ ನಮ್ಮಲ್ಲಿ ಮುಂಜವಿ, ಅದಕ್ಕ ಒಂದ ಕುಕ್ಕಡಿ ಕೊಡs

**ಅಮ್ಮಕ್ಕ:**—( ಕುಕ್ಕಡಿ ಕೊಡುತ್ತ ) ತಗೊಳ್ಳ ರಂಗಮ್ಮs. ಇದಕ್ಯಾಕ ಇಷ್ಟs

**ರಂಗಮ್ಮ:**—ನೋಡ ಅಮ್ಮಕ್ಕs. ನಾಳೆ ನಿನಗೆ ಹೋಗೋ ಗಡಬಿಡಿ. ಅದಕ್ಕ ಅಷ್ಟರೊಳಗs ಸವಡ ಮಾಡಿಕೊಂಡು ನಮ್ಮಲ್ಲೇನ ಊಟಾ ತೀರಿಸಿಕೊಂಡ ಹೋಗು. ತಿಳೀತs ಅಮ್ಮಕ್ಕs

**ಅಮ್ಮಕ್ಕ:**— ತಿಳೀತ ರಂಗಮ್ಮ ಇರಲಿ ! ನಾಳಿಂದ ನಾಳೆ ನೋಡಾಕ ಬಂದೀತು.

**ರಂಗಮ್ಮ :**—ಹಾಂಗಾದ್ರs ಹೋಗತೇನಿ ಅಮ್ಮಕ್ಕs. ಬ್ಹಾಳ ಜೋಕಿಲೆ ಹೋಗು ಆತು. ( ಎದ್ದು ಹೋಗುವದರಲ್ಲಿದ್ದಾಳೆ )

**ಅಮ್ಮಕ್ಕ:**—( ಎದ್ದು ) ಹೂಂ! ರಂಗಮ್ಮ ಹೋಗೇ ಬರ್ತೇನಿ. ಮುಟಿಗ್ಯಾನ ಮಾತು ಮುಟಿಗ್ಯಾಗ ಇರಲಿ ! ( ಬಾಗಿಲಹೊರಗೆ ಕಳಿಸಲು ಬರುತ್ತಾಳೆ. ರಂಗಮ್ಮ ಹೋಗುತ್ತಾಳೆ.)

**ಪರದೆ ಬೀಳುವದು.**

---

# ೩ನೆಯ ದೃಶ್ಯ.

ಸ್ಥಳ—ಅರಣ್ಯ ಪ್ರದೇಶ.

( ಬಿಜ್ಜಮಹಾದೇವಿ ಮರುದಿನ ನಸುಕಿನಲ್ಲಿ ಸ್ನಾನ-ಪೂಜಾದಿಗಳನ್ನು ತೀರಿಸಿಕೊಂಡು ಪರಮೇಶ್ವರನ ಅಣತಿಯಂತೆ ಅರಣ್ಯಕ್ಕೆ ತೆರಳಲು ಸನ್ನ-ದ್ಧಳಾಗಿದ್ದಾಳೆ. ಆನಂದದ ಉಬ್ಬಿನಲ್ಲಿ ಕಾಡಕ್ಕುರುಳ ತರುವ ನೆವವ ನೊಡ್ಡಿ ಅರಣ್ಯದತ್ತ ಹೊರಟಿದ್ದಾಳೆ.)

**ಅಮ್ಮಕ್ಕ**:—(ಅರಣ್ಯದಲ್ಲಿ ಮುಂದಕ್ಕೆ ಸಾಗುತ್ತ, ಸ್ವಗತ)ದೇವಾ ! ಕಂದನಾಗಿ ಈ ಘೋರಾರಣ್ಯದಲ್ಲಿ ಬರುವೆಯಾ ? ಇಲ್ಲಿ ಬರು-ವೆಯಾ ? ನನ್ನ ಮನೆಯಲ್ಲಿಯೇ ಏಕೆ ಬರಬಾರದಿತ್ತು ? ಇಲ್ಲಿ ಮೃಗಗಳ ಅಂಜಿಕೆ ನಿನಗಿಲ್ಲವೇ ? (ಮುಂದೆ ಸಾಗುತ್ತಿರುವಾಗ) ಅಕಟಕಟ್ಟೆ ಇದುವೇ ಈ ಅರಣ್ಯದ ಮಧ್ಯಸ್ಥಳವು. ಅದೋ! ಅಲ್ಲಿ ಮೃಗಗಳು ಅದೆಷ್ಟು ಚಕ್ಕಂದದಿಂದ ಚೆಲ್ಲಾಟವಾಡುತ್ತಿವೆಯಲ್ಲ! ಅಹಹ! ಇಂಥ ನಿರ್ಜನ ಪ್ರದೇಶದಲ್ಲಿಯೂ ಕೂಡ ಚಿಗರಿ ಸಾರಂಗಗಳು ತಮ್ಮ ಮರಿಗಳನ್ನು ಅಪ್ಪಿಕೊಂಡು ಅದೆಷ್ಟು ಚಿನ್ನಾಟವಾಡುತ್ತಿವೆಯಲ್ಲಃ ( ನೊಂದುಕೊಂಡು ) ನೋದೆನು! ಸೈರಿಸಲಾರೆನು ! ಮಕ್ಕಳಿಲ್ಲದ ಈ ಬಂಜೆತನಕ್ಕೆ ಬೆಂಕಿ ಹಚ್ಚಲಿ. ಅಯ್ಯೋ ! ಶಿವನೇ ! ಮಕ್ಕಳಿಲ್ಲದೆ ಹೆಣ್ಣು ಜೀವಿಯಾಗಿರು-ವದಕ್ಕಿಂತ ಮಕ್ಕಳಿದ್ದು ಮೃಗವಾಗಿ ಬಾಳುವದು ಲೇಸಲ್ಲವೇ ? ಶಿವಶಿವಾ ! ನನ್ನನ್ನು ಈ ಕಾಡಿನಲ್ಲಿಯ ಒಂದು ಪ್ರಾಣಿಯನ್ನಾಗಿಯಾದರೂ ಹುಟ್ಟಿಸಬಾರದಿತ್ತೇ ? (ದೂರದಲ್ಲಿ ಚೆಲ್ಲಾಟವಾಡುತ್ತಿರುವ ಮಂಗಗಳನ್ನು ಕಂಡು ) ಅದೋ! ಅತ್ತ ಕಡೆ ಆ ಮಂಗವು ! ತನ್ನ ಮಗುವಿನ ಕೂಡ ಎಷ್ಟು ಚೆಲ್ಲಾಟ-ವಾಡುತ್ತಿದೆಯಲ್ಲಃ ! ಅಯ್ಯೋ! ದೇವರೇ ನನ್ನನ್ನು

ಈ ಕೋತಿಗಿಂತಲೂ ಕೀಳು ಕಂಡೆಯಾ ? ಶಿಶುವಾಗಿ ಬಂದಿ-ಹೆನು-ತಾಯಿ ಬಾ ಎಂದು ಕರೆದು ನನ್ನನ್ನಿಲ್ಲಿ ಬರಸಿದುದು ಈ ಸಂಕಟಕ್ಕಾಗಿಯೇ ? ಭವಹರಂ ನಿನಗೆ ಮಗುವಾಗಿ ಬಂದಿಹನೆ ಬಾ ಎಂದು ಕರೆದುದು ನಿಜವೇ ? ಹಾಯ್ ಶಿಶುವೇ ! ಬಾ ! ಅಡವಿಯುಲಿ ಬಿಟ್ಟದಲಿ ತಿರುಗದಿರು. ಮಡುವಿನಲಿ ಹಳ್ಳದಲಿ ಮುಳುಗದಿರು. ಹುಲಿ ಚಿರ್ಚುಗಳ ಬಾಯ್ಗೆ ತುತ್ತಾಗದಿರು. ಎಲ್ಲೈ ಕಂದ! ಎಲ್ಲಿರುವೆ ? ( ಹುಡುಕುತ್ತ ) ಇಲ್ಲಿಯೋ, ಅಲ್ಲಿಯೋ, ಎಲ್ಲಿರುವಿ? ಅಮ್ಮಯ್ಯ ! ಎಲ್ಲಿಯೂ ಇಲ್ಲವಲ್ಲ. ದೇವದೇವಾ ! ಅನಾಥನಾಥಾ ! ಕರುಣೆ ಬಾರದೆ ? ಏ ಶಿವನೇ, ಬಾ ಶಿವನೇ, ಆಸೆ ಮಾಣಿಸು ಶಿವನೇ ?

( ನಿಃಶಬ್ದತೆ. )

( ಎಲ್ಲಿಂದಲೋ ಕೂಸು ಅಳುವ ಧ್ವನಿ ಕೇಳಬರುತ್ತದೆ )

**ಅಮ್ಮಕ್ಕ:**—( ಆಶ್ಚರ್ಯಚಕಿತಳಾಗಿ ) ಅಮ್ಮಾ, ಕಂದಾ! ಎಲ್ಲಿರುವಿ ? ( ಅತ್ತಿತ್ತ ಓಡಾಡಿ ಹುಡುಕುತ್ತ ) ಮಗು ಎಲ್ಲಿ ಕುಳಿತಿರುವೆ ?

( ಮತ್ತೆ ಕೂಸು ಅಳುವ ಧ್ವನಿ ಕೇಳಬರುತ್ತದೆ. )

**ಅಮ್ಮಕ್ಕ:**—ಕಂದಾ! ಎಲ್ಲಿರುವೆಯಯ್ಯ ? ( ಮುಂದೆ-ಮುಂದೆ ಸಾಗುತ್ತಿರುತ್ತಾಳೆ. )

( ಮತ್ತೆ ಕೂಸು ಹಲುಬುತ್ತದೆ. )

**ಅಮ್ಮಕ್ಕ:**— ಅಯ್ಯೋ ? ಯಾರಾದರೂ ನನ್ನ ಕಂದಮ್ಮನನ್ನು ನೋಯಿಸುತ್ತಿರಬಹುದೇ ? ಅಯ್ಯೋ ! ಕಂದಾ ! ಕಾಣಿಸಿಕೊಳ್ಳಲೊಲ್ಲೆಯೇಕಯ್ಯ ? ಎಲ್ಲಿರುವೆ ? (ಹುಡುಕುತ್ತಿರುತ್ತಾಳೆ. ಮತ್ತೆ ಕೂಸು ಅಳುವದು. ದೂರದಲ್ಲಿ-ಅಲ್ಲಿ, ಆ ಕಂಟೆಯ ಮರೆಯಲ್ಲಿ ಮಲಗಿದ ಮಗುವನ್ನು ಕಂಡು, ಧಾವಿಸಿ ) ಅಯ್ಯೋ! ಯಾರಾ-

ದರೂ ನನ್ನ ಕಂದಮ್ಮನನ್ನು ನೋಯಿಸಿದ್ದಿರಬಹುದೇ? (ಕೂಸನ್ನು ಎತ್ತಿಕೊಂಡು ಮುದ್ದಿಸುತ್ತ, ಆನಂದದಿಂದ) ಪರಮಾತ್ಮನ ಲಕ್ಷಣಗಳೇ ಈ ಕೂಸಿನ ಲಕ್ಷಣಗಳು! ದೇವಾ ಬಾಲಶಿವನೇ! ಈ ಘೋರಾರಣ್ಯದಲ್ಲಿ ಅದ್ಹೇಗೆ ಪ್ರವೇಶಿಸಿದೆ? (ಅನುಮಾನಿಸುತ್ತ) ಅಮ್ಮಾ! ಕೂಸು ಎರಡನೆಯವರದಾದರೆ ಹೇಗೆ? ಯಾರಾದರೂ ಬೇರೆ ತಾಯಂದಿರು ನನ್ನ-ಹಾಗೆಯೇ ಕುಳ್ಳು ಆರಿಸುವುದಕ್ಕಾಗಲಿ, ಕಟ್ಟಿಗೆ ಆರಿಸುವುದಕ್ಕಾಗಲಿ ಬಂದು ಇಲ್ಲಿ ಮಲಗಿಸಿ ಕೆಲಸಕ್ಕೆ ತೆರಳಿರಬಹು-ದಲ್ಲವೆ? (ಅತ್ತಿತ್ತ ನೋಡುತ್ತ) ಆಗಲಿ! ಕರೆಯುವೆನು! ಕರೆದು ನೋಡುವೆನು. ಓ! ಯಾರಿರುವಿರಿ? ಓ ಯಾರಿರುವಿರಿ? (ಪ್ರತಿಧ್ವನಿಕೇಳಿ) ಅಯ್ಯೋ! ನನ್ನ ಹಾಗೆಯೆ ತಿರುಗಿ ಕೇಳುತ್ತಿರುವರಲ್ಲ. ನೋಡಿದರೆ ಯಾರೂ ಇಲ್ಲ. ನನ್ನ ಧ್ವನಿಯೇ ನನಗೆ ಪ್ರತಿಯಾಗಿ ಕೇಳುತ್ತಿರಬಹುದೇ? ಇರ-ಬಹುದು! ಪ್ರತಿಧ್ವನಿಯಾಗಿರಬಹುದು! (ಕಂದಮ್ಮನನ್ನು ಪ್ರೇಮದೃಷ್ಟಿಯಿಂದ ನೋಡಿ) ಕಂದಾ! (ಸ್ವ) ಅಮ್ಮಮ್ಮ! ಆ ಶಿವನ ಸ್ವರೂಪವೇ ಈತನು. ಅವನ ಲಕ್ಷಣಗಳೇ ಈ ಕಂದಮ್ಮನ ಲಕ್ಷಣಗಳಾಗಿವೆ. (ಪ್ರ) ಶಿವನೇ ನಿನ್ನಮಾತು ಸತ್ಯ! ನಿನಗೆ ನಾನಿನ್ನು ಚಿರಋಣಿ ದೇವಾ! (ಸ್ವ) ಅಮ್ಮಾ! ತಾಯಿಯ ಧ್ವನಿಕೇಳಿ ಸುಮ್ಮನಾಗುವಂತೆ ಸುಮ್ಮನಾಯಿತಲ್ಲವಯ್ಯ (ಪ್ರ) ಬಾರಯ್ಯ ಕಂದ! (ಅಪ್ಪಿಕೊಂಡು) ಯಾಕಪ್ಪ ಮಗು! ಆ ಕಡೆ ಹೊರಳುತ್ತೀ? ಬಾ! ನಾನಾರೆಂದು ಸಂಕೋಚವೇ? ನಿನಗಾಗಿ ಹಂಬಲಸಿ ಹಲುಬುತ್ತಿರುವ ತಾಯಿ ನಾನು! ಬಾ ಮಗು! (ಮುದ್ದಿಸುತ್ತ) ಇಲ್ಲಿರಿಸಿ ಪೋದ-ರಾರೈ ಚನ್ನನೇ ನಿನ್ನ. ಇಲ್ಲಿಗೇತಕೆ ಬಂದೆ ಎನ್ನ ಭಾಗ್ಯದ ಚಿನ್ನ!

ಕರಡಿಗಳು ಬಂದು ನಿನ್ನಂ ತಿನ್ನವೇ? ಮೈ ಕಂದಿತೇ?
(ಕೂಸು ನಗುವದು) ಇದುವೇ ನನ್ನ ಮನದಾನಂದ!
ಆಹಹ! ಇದುವೆ ನನ್ನ ಬಾಳಿನ ಬಯಕೆ! (ಕಂದನಿಗೆ)
ಕಂದಾ ನಮ್ಮಯ ಮನೆಗಿಂದು ಹೋಗುವಾ ನಡೆ!............
(ಆತ್ಮಾನಂದದಿಂದ.)

**" ಸಸಿಯ ಮೇಲೆ ಸಾಗರವು ಹರಿದಂತಾಯಿತ್ತಯ್ಯಾ**
**ಎನ್ನ ಭಕ್ತಿ! ಆನಂದದಿಂ ಕುಣಿ-ಕುಣಿದಾಡುವೆ,**
**ಆನಂದದಿಂ ನಲಿ-ನಲಿದಾಡುವೆ! ಕೂಡಲ ಸಂಗನ**
**ಶರಣರು ಬಂದರೆ ಉಬ್ಬಿ, ಕೊಬ್ಬಿ ನಲಿ-ನಲಿದಾಡುವೆ"**

(ಮನೆಯ ಕಡೆ ಹಿಂತಿರುಗುತ್ತಿರುವಾಗ)

(ಪರದೆ ಮುಚ್ಚುವದು)



## ೪ ನೆಯ ದೃಶ್ಯ.

ಸ್ಥಳ:—ಬಿಜ್ಜಮಹಾದೇವಿಯ ಮನೆ.

(ಬಾಲ್ಯಮಂ ತಳೆದು ಬಂದ ಪರಮೇಶ್ವರನನ್ನು ಎತ್ತಿಕೊಂಡು, ಮುದ್ದಾಡುತ್ತ ಆನಂದದಿಂದ ಮನೆಗೆ ಬಂದಿದ್ದಾಳೆ. ಬರುವಷ್ಟರಲ್ಲಿಯೇ ಈ ಸುದ್ದಿ ಊರೆಲ್ಲ ಹಬ್ಬಿರುತ್ತದೆ. ನೆರೆಮನೆಯ ರಂಗಮ್ಮ ಆಗಲೇ ಬಂದದ್ದಾಗಿದೆ. ಅಮ್ಮಕ್ಕನಿಗೆ ಮಗುವನ್ನು ಎರೆಯುವಲ್ಲಿ ಸಹಾಯಕಾರಿಯಾಗಿದ್ದಾಳೆ. ಅಮ್ಮಕ್ಕ ಮಗುವಿಗೆ ಬಟ್ಟೆ ತೊಡಿಸುತ್ತಿದ್ದಾಳೆ.)

**ರಂಗಮ್ಮ:**—ಅಮ್ಮಕ್ಕ, ನೀನು ನಿಜವಾಗಿಯೂ ಭಾಗ್ಯಶಾಲಿ ನೋಡಮ್ಮ! ನಿನ್ನ ಈ ಗುಣ ಶೀಲಗಳಿಗೆ ಮೆಚ್ಚಿ ಪರಮಾತ್ಮನು ನಿನಗೆ ಈ ಭಾಗ್ಯ ನಿಧಿಯನ್ನು ಕೊಟ್ಟಿದ್ದಾನೆ. ಇಲ್ಲಿಯ ವರೆಗೆ ನೀ ಪಟ್ಟ ಕಷ್ಟಗಳೆಲ್ಲ ತಾವಾಗಿಯೇ ದೂರವಾದವು ನೋಡಮ್ಮಾ! ಅಮ್ಮಕ್ಕಾ ನಿನ್ನ ಕನಸು ನನಸಾಯಿತಲ್ಲಮ್ಮs ....

**ಅಮ್ಮಕ್ಕ:**—ರಂಗಮ್ಮ! ಎಲ್ಲವೂ ಆ ದಯಾಘನನಾದ ಪರಮಾತ್ಮನ ಕೃಪಾಬಲದಿಂದಲ್ಲವೇ?

**ರಂಗಮ್ಮ:**—ಇರಲಿ ಅಮ್ಮಕ್ಕ! ನಾಮಕರಣ ಸಮಾರಂಭ ಮಾಡೋಣ! ಅದಕ್ಕs ಒಂದ ನಾಲ್ಕ ಜನರಿಗೆ ಹೇಳಿ ಬರತೇನಿ.

**ಅಮ್ಮಕ್ಕ:**— ಯಾತಕ್ಕ ರಂಗಮ್ಮs ಪರಮಾತ್ಮನಿಗೆ ನಾಮಕರಣ ಸಮಾರಂಭ ಮಾಡುವವರು ನಾವೆಷ್ಟರವರು. ಅವನಿಗೆ ಒಂದೇ ನಾಮವೇ? ಎಲ್ಲ ನಾಮುಗಳಲ್ಲಿಯೂ ಅವನು ಅಡಕವಾಗಿರುವನು. ಬೇಡಮ್ಮs ಅವನಿಗೇಕೆ ಈ ಸಮಾರಂಭ!

**ರಂಗಮ್ಮ:**—ಅದಂತೂ ಆತ ರಂಗಮ್ಮs. ಪದ್ಧತಿ ಪ್ರಕಾರ ನಾವು ಮಗನಿಗೆ ನಾಮಕರಣ ಮಾಡಲೇಬೇಕು ತಿಳಿತs. ನಾ ಎಲ್ಲಾ ಮಾಡತೇನಿ! ನಿನಗೇನು ತ್ರಾಸ ಮಾಡುದುಲ್ಲಾ.

**ಅಮ್ಮಕ್ಕ:**— ಏನಾರ ಮಾಡಮ್ಮ s

( ರಂಗಮ್ಮ ಹೋಗುತ್ತಾಳೆ. )

(ರಸ್ತೆಯ ಈಚೆಯ ಬದಿಗೆ ಕೃಷ್ಣಕ್ಕ, ಆಚೆಯ ಬದಿಗೆ ಗಂಗಮ್ಮ s. ಒಬ್ಬರಿಗೊಬ್ಬರು ಭೆಟ್ಟಿಯಾದಾಗ ಮಾತಿಗೆ ಮಾತು ನಡೆಯುತ್ತವೆ.)

**ಕೃಷ್ಣಕ್ಕ:**— (ಗಂಗಮ್ಮನನ್ನು ದೂರಿಂದಲೆ ಕಂಡು) ಅಯ್ಯs ! ಗಂಗಮ್ಮ s. ಗಂಗಮ್ಮ ಎಲ್ಲಿಗಿ ಹೊರಟೇದಿs ?

**ಗಂಗಮ್ಮ:**— ಎಲ್ಲಿಲ್ಲ ಕೃಷ್ಣಕ್ಕs. ಇಲ್ಲೇ ಸ್ವಲ್ಪ ಭಟ್ಟರ ಮನಿಯೊಳಗ ಕೆಲಸ ಇತ್ತು. ಹೊರಟೇನಿ. ಯಾಕ ಕೃಷ್ಣಕ್ಕ, ನೀನೆಲ್ಲಿ ಹೊರಟೇದಿ ?

**ಕೃಷ್ಣಕ್ಕ:**— ಅಯ್ಯ ! ನಿನಗ ಗೊತ್ತs ಇಲ್ಲೇನು ? ನೋಡs ಗಂಗಮ್ಮ, ಆ ಅಮ್ಮಕ್ಕ ಅದಾಳ ಅಲ್ಲ, ಆಕಿದ ಗೊತ್ತದ ಏನs ನಿನಗs

**ಗಂಗಮ್ಮ:**— ( ವಿಚಾರಿಸುತ್ತ ) ಅಮ್ಮಕ್ಕs ಹಂ! ಹಂ! ಅವಳ ಹೌದಲ್ಲೊ ಮಹಾದೇವಿ. ನೂಲತಾಳು.

**ಕೃಷ್ಣಕ್ಕ:**— ಹಾಂ! ಗಂಗಮ್ಮs ಆಕೀನs

**ಗಂಗಮ್ಮ:**— ಹಾಂಗಾದ್ರ ಗೊತ್ತೈತಿ ಬಿಡs. ಪುಟ್ಟಪೂರಾ ಗೊತ್ತದ ಆಕಿ ಬ್ಹಾಳ ಒಳ್ಳೆಯವಳ ನೋಡ ಕೃಷ್ಣಕ್ಕs. ಯಾಕ ಕೃಷ್ಣಕ್ಕ, ಅವಳದ್ಯಾಕ ಸುದ್ದಿ ?

**ಕೃಷ್ಣಕ್ಕ:**— ಯಾಕ ಅಂತ ಕೇಳ್ತಿ ಅಲ್ಲs ನಿನಗ ಗೊತ್ತs ಇಲ್ಲೇನು ? ಅಯ್ಯ ನೋಡ, ಆಕಿಗೆ ದೇವರ ಮಗಾ ಆಗ್ಯಾನಂತs.

**ಗಂಗಮ್ಮ:**— ಬಿಡs ನಮ್ಮವ್ವ, ಆಕಿಗ್ಹ್ಯಾಂಗ ಮಗಾ ಆಗ್ತಾನs, ಗಂಡ ಸತ್ತ ಹೆಣ್ಣಮಗಳು.

**ಕೃಷ್ಣಕ್ಕ**:--ಅಯ್ಯ, ಅಡವಿಯೊಳಗ ದೇವರs ಮಗಾ ಆಗಿ ಬಂಧಿ ದ್ದಂತ್ಯ. ಹೋಗಿ ತಗೊಂಡ ಬಂದಳಂತs. ನಿನಗರಾ ಖರೆ ಅನಸ್ತದ ಏನ ಗಂಗಮ್ಮ?

**ಗಂಗಮ್ಮ**:—ನನಗೇನ ಖರೆ ಅನಸುವುಲ್ಲವಾ, ಯಾರ ಹೇಳಿದ್ರ ನಿನ್ಗ ಗಿದನ್ನ.

**ಕೃಷ್ಣಕ್ಕ**:—ಅಯ್ಯಯ್ಯ ಆಕಿ ಅದಾಳಲ್ಲಾ, ನೆರಿಮನಿ ಗೆಳತಿ ರಂಗಮ್ಮ ಕೂಸನ ತೊಟ್ಟಿಲಾಗ ಹಾಕ್ತಾರಂತ ಅದಕ್ಕ ಎಲ್ಲಾರಿಗೂ ಹೇಳಿಕೊಂತ ಹೊರಟಾಳು.

**ಗಂಗಮ್ಮ**:—ರಂಗಮ್ಮ?

**ಕೃಷ್ಣಕ್ಕ**:-- ಹೂಂ! ಗಂಗಮ್ಮ, ರಂಗಮ್ಮನನs, ನಿನಗ ಗೊತ್ತೈತೇನು?

**ಗಂಗಮ್ಮ**:—ಅಷ್ಟೇನ ಗೊತ್ತಿಲ್ಲವ್ವಾ. ಹಾಂಗs ಯಾವಾಗೊ ಒಮ್ಮೆ ನೋಡೇನಿ ಅತು.

**ಕೃಷ್ಣಕ್ಕ**:—ಗಂಗಮ್ಮ, ಆಕಿ ಬ್ಹಾಳ ಕೆಟ್ಟ ಅಂದ್ರ ಬ್ಹಾಳ ಕೆಟ್ಟ ಅದಾಳ ನೋಡವ್ವ. ಅಲ್ಲs, ದಿವ್ಸಾ ನಮ್ಮ ಮನಿಗೆ ಬರತಾಳ s ಒಂದಿಷ್ಟ ಪಲ್ಯಾಕೊಡs, ಒಂದಿಷ್ಟ ಭಕ್ಕರಿ ಕೊಡs, ಅಂತ ಬರತಾಳ. ದಿನಾ ಸಾಯಾವರಿಗೆ ಯಾರ ಆಳಬೇಕs ಗಂಗಮ್ಮ.

**ಗಂಗಮ್ಮ**:--ಹೌದಂತವ್ವಾ. ಮೊನ್ನೆ ಕೀರ್ತನಕ ಹೋದಾಗ ಮಾತಾಡ್ತಿದ್ರು, ಇದs ಏನ ಅಂಗಾರ ಅದ,s

**ಕೃಷ್ಣಕ್ಕ**:--ಇರಬೇಕ. ಅಲ್ಲs ಗಂಗಮ್ಮ, ನೀ ಹೋಗ್ತಿಯೊ ಇಲ್ಲೊ ತೊಟ್ಟಿಲಾಗ ಹಾಕಾಕ.

**ಗಂಗಮ್ಮ**:— ನೋಡಬೇಕವ್ವಾ, ಮನೆಯೊಳಗ ಅಪ್ಪಣೆ ದೊರತರs

**ಕೃಷ್ಣಕ್ಕ**:—ಅಯ್ಯ, ಕರದರ ನಾನೂ ಹೋಗಬೇಕಂತ ಮಾಡೇನಿ! ಆದರೆ ಹಂಗs ಹ್ಯಾಂಗ ಹೋಗೋದು, ಅಲ್ಲs, ನಿಮ್ಮಲ್ಲಿ ಒಂದ ಕುಬಸದ ಖಣಾ ಇದ್ದರ ಕೊಡ್ರs ಎವ್ವಾ.

**ಗಂಗಮ್ಮ**:--ನೋಡತೇನವ್ವ, ಮೊನ್ನೆ ಪೆಟಗಿ ಸಂದ್ರ್ಯಾಗ ಇಟ್ಟಿದ್ನಿ. ಇದ್ದರ ನೋಡ್ತೇನಿ, ಇದ್ದರ ಕೊಡ್ತೇನಿ, ಇಲ್ದಿದ್ರ ಇಲ್ಲಾs

**ಕೃಷ್ಣಕ್ಕ**:— ನೋಡ ಗಂಗಮ್ಮ ಆ ವ್ಯಾಲ ಬರತೇನಿ (ಎಂದು ಕೃಷ್ಣಕ್ಕ ತೆರಳುತ್ತಾಳೆ.)

**ಗಂಗಮ್ಮ**:— ( ಸ್ವಗತ ) ಅಯ್ಯ! ಏನs ಎವ್ವಾ ಇಕಿ! ಅಲ್ಲs ಪಾಪ ! ರಂಗಮ್ಮ ಎಷ್ಟ ಒಳ್ಳೇಯವಳು ! ಆಕಿನ್ನ ತೆಗಳತಾಳಲ್ಲ! ಕಳ್ಳನ ಜೀವ ಹುಳ್ಳುಳ್ಳಗಂತs. ಅಯ್ಯ ! ನೋಡ್ರೆವ್ವಾ ನೀವs ತನ್ನ ಹತ್ತರ ಅರಪಾವ ಹುಳಕ ಇಟಗೊಂಡು ಮುಂದಿದ ಗಿರ– ಪಾವು ತಗಿತಾಳs. ಏನ ಜನರs ಎವ್ವಾ .....................

**" ಲೋಕದ ಡೊಂಕ ನೀವೇಕೆ ತಿದ್ದುವಿರಿ ? ಮೊದಲು**
**ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ ! ನಿಮ್ಮ ನಿಮ್ಮ**
**ಮನವ ಸಂತೈಸಿಕೊಳ್ಳಿ ! ನೆರೆಮನೆಯವರ**
**ದುಃಖಕ್ಕೆ ಅಳುವವರ ಮೆಚ್ಚ ಕೂಡಲ ಸಂಗಮ ದೇವಾ "**

( ಕೈ ಜಾಡಿಸುತ್ತ ) ಇರವಲ್ತು. ನಮಗಾರ ಯಾತಕ್ಕ ಬೇಕು. ( ಗಂಗಮ್ಮನೂ ಹೋಗುತ್ತಾಳ. )

[ ರಸ್ತೆಯ ಪಡದೆ ಮೇಲಕ್ಕೆ ಏಳುತ್ತದೆ. ಒಳಗೆ ಅಮ್ಮಕ್ಕ ತೊಟ್ಟಿಲ ಸಮಾರಂಭದ ಸಿದ್ಧತೆಯಲ್ಲಿದ್ದಾಳೆ. ಕಡೆಮನಿ ಕಲ್ಲವ್ವ ಬಂದು ತೊಟ್ಟಿಲ ವನ್ನು ಕಟ್ಟಿದ್ದಾಳೆ. ರಂಗಮ್ಮನ ಹೇಳಿಕೆಯಂತೆ ಯಮುನಕ್ಕ ಬರುತ್ತಾಳೆ]

**ಯಮುನಕ್ಕ**:—(ಪ್ರವೇಶಿಸಿ) ಏನs ಅಮ್ಮಕ್ಕ ! ರಂಗಮ್ಮ ಹೇಳಿದ್ದ ನಿಜಾನs

**ಅಮ್ಮಕ್ಕ**:-ಬಾ ಯಮುನಕ್ಕs ಪರಮಾತ್ಮನ ಕೃಪಾಬಲದಿಂದ ನೋಡಮ್ಮ ಕೂಸನ್ನs ( ಕೂಸನ್ನು ಕೊಡಹೋಗುತ್ತಾಳೆ )

**ಯಮುನಕ್ಕ**:-(ಕೂಸನ್ನು ಎತ್ತಿಕೊಂಡು, ಮುದ್ದು ಕೊಡುತ್ತ) ಅಮ್ಮಕ್ಕ! ನಿನ್ನ ನಸೀಬ ತೆರೀತ ನೋಡವ್ವಾ.

**ಕಲ್ಲವ್ವ**:—ಅಲ್ರಿ, ಯಮುನಕ್ಕನವರs ಅವ್ವಾರ ಎಷ್ಟಾರ ಪುಣ್ಯಮಾಡಿ—ರಬೇಕ್ರಿ ದೇವರs ಮಗಾ ಆಗಿ ಬರಬೇಕಾದ್ರs

**ಯಮುನಕ್ಕ**:—ನೋಡs ಕಲ್ಲವ್ವ,ಹದಿನೆಂಟ ದೇವರಿಗೆ ಹರಕಿಹೊತ್ತರೂ ಮಕ್ಕಳ ಆಗುದುಲ್ಲಾ, ದೇವರs ಈಕಿಗಿ ಮಗಾ ಆಗಿ ಬಂದಾ ಅಂದ್ರs ಇವಳ ಭಕ್ತಿ ಅರಾ ಎಷ್ಟ ಅದ ನೋಡs ಕಲ್ಲವ್ವ.

**ಅಮ್ಮಕ್ಕ**:—ಏನ ಕೇಳ್ತಿ ಕಲ್ಲಕ್ಕs ನನ್ನದೆಲ್ಲಿ ಭಕ್ತಿ! ಎಲ್ಲಾ ಆ ಪರಮಾತ್ಮಂದು. ಇರಲಿ ಕಲ್ಲಕ್ಕ, ತೊಟ್ಟಲಾ ಸರಿಯಾಗಿ ಕಟ್ಟಿ ಗುಬ್ಬಿ ಛತ್ ಕಟ್ರಮ್ಮ.

**ಕಲ್ಲವ್ವ**:—ಹೂಂರ್ರವ್ವಾ ! ( ತೊಟ್ಟಲ ಶೃಂಗಾರ ಮಾಡುತ್ತಾಳೆ. ಅಷ್ಟರಲ್ಲಿ ರಂಗಮ್ಮ ಹೆಣ್ಣು ಮಕ್ಕಳ ತಂಡದೊಂದಿಗೆ ಪ್ರವೇಶಿಸುತ್ತಾಳೆ)

**ರಂಗಮ್ಮ**:—(ಪ್ರವೇಶಿಸಿ) ಅಮ್ಮಕ್ಕ ಏಳ್ರಿನ್ನ. ಎಲ್ಲಾರು ಬಂದ್ರು (ಅಮ್ಮಕ್ಕನ ಸಮೀಪ ಬಂದು ) ಕೂಸಿಗೆ ಹೊಸಾ ಬಟ್ಟಿ ಹಾಕಿದ್ರ್ಯಾ?

**ಅಮ್ಮಕ್ಕ**:—ತಗೊಳ್ಳ ರಂಗಮ್ಮ ಖಾದಿ ಬಟ್ಟಿ ಇಲ್ಲೆ ತಯಾರಿಸಿನಿ.

**ರಂಗಮ್ಮ**:—( ಬಟ್ಟಿ ತೆಗೆದುಕೊಳ್ಳುತ್ತ ) ಅಮ್ಮಕ್ಕ! ನಿನ್ನ ಈ ಕಾಯಕವೇ ಕೈಲಾಸವಾಯಿತು ನೋಡಮ್ಮ ! ಕಾಯಕದ ಪರಿಶ್ರಮದಿಂದ ಬಂದ ಬಟ್ಟಿಯೇ ದೇವರಿಗೆ ಭೂಷಣ ! ( ಎಂದು ಕೂಸಿಗೆ ಬಟ್ಟಿ ತೊಡಿಸುತ್ತಾಳೆ )

**ಕಲ್ಲವ್ವ**:—ಅವ್ವಾರ, ತೊಟ್ಟಲ ತಯಾರ ಆಯಿತ ನೋಡ್ರಿ.

**ಶಂಗಮ್ಮ:**—ನಮ್ಮ ಅಮ್ಮಕ್ಕನಿಗೆ ಯಾರೂ ಸರಿ ಇಲ್ಲ ನೋಡ್ರೆಮ್ಮಾ ಶಿವನ ಬಲವು ಆದಾರಿಗುಂಟು ? ಅವಳು ಕೂಸಿಗೆ ಎರೆದ ಹಾಲು ಕರುಣಾಮೃತವಾಯ್ತು! ಇಟ್ಟ ಭಸ್ಮದ ತಿಲಕ ಉರಿಗಣ್ಣಿ ತಂಪಾಯ್ತು! ತೊಟ್ಟಿಲ ಕೆಳಗೆ ಇಟ್ಟ ಅಗ್ನಿ ಧೂಪವಾಯ್ತು! ತೊಟ್ಟಿಲವೇ ಶಿವನಿಗೆ ಶಯ್ಯಾಗೃಹವಾಯ್ತು ! ಇಂತೊಪ್ಪುವ ಮಹಾ ಮಹಿಮನ ತಾಯಿ ಅಮ್ಮಕ್ಕನ ಭಾಗ್ಯ ಇನ್ನಾರಿಗಿದೆ ಯಮ್ಮಾ !

( ಗುಗ್ಗರಿ ಹಂಚುತ್ತಿರುವಾಗಲೇ )

**ಪರದೆ ಮುಚ್ಚುವುದು.**



## ೫ನೆಯ ದೃಶ್ಯ.

ಸ್ಥಳಃ—ಬಿಜ್ಜಮಹಾದೇವಿಯ ಮನೆ

( ಎಂದಿನಂತೆ ಅಮ್ಮಕ್ಕ ಮಗನನ್ನು ಎರೆದು ತೊಟ್ಟಿಲಲ್ಲಿ ಮಲಗಿಸಿದ್ದಾಳೆ. ತೊಟ್ಟಿಲ ತೂಗುತ್ತ-ತೂಗುತ್ತ ಈಳಿಗೆಯಿಂದ ಕಾಯಿಪಲ್ಲೆ ಹೆರಚುತ್ತಿದ್ದಾಳೆ. ಪಾಪ! ಕೂಸಿಗೆ ಬಾಲಗ್ರಹ ರೋಗ ಬಂದೊದಗುತ್ತದೆ. ಒಮ್ಮೆಲೇ ಕೂಸು ಚಿಟ್ಟನೇ ಚೀರುತ್ತದೆ. )

**ಅಮ್ಮಕ್ಕಃ**—( ದಿಂಙ್ಮೂಢಳಾಗಿ ) ಏನಾಯ್ತು ಮಗು! ( ಎದ್ದು ತೊಟ್ಟಿಲ ಬಳಿ ಹೋಗುತ್ತಾಳೆ ) ಯಾಕಪ್ಪs ನಿದ್ದೆ ಬಾರದೇ! ( ಎತ್ತಿಕೊಳ್ಳಲು ಹೋಗುತ್ತಾಳೆ ) ( ಗಾಬರಿಯಾಗಿ ) ಅಯ್ಯೋ! ಮಗು ಏನಾಯಿತಪ್ಪ, ಕಂದಮ್ಮ! ಕೈಕಾಲುಗಳೇಕೆ ಬಾಯುತ್ತಿವೆ ? ( ದುಃಖದಿಂದ ) ಮಗು ! ಕಂದಮ್ಮ ! (ಎತ್ತಿಕೊಂಡು) ಮಗು ! ಕಂದs! ಕೈಕಾಲುಗಳೇಕೆ ನಡುಗುತ್ತಿವೆಯಯ್ಯ ? ನಾಗೇಶ ಇಷ್ಟೇಕೆ ಬೆವರಪ್ಪs ( ವಸ್ತ್ರದಿಂದ ಬೆವರನ್ನು ಒರಿಸುತ್ತ ) ಮಗು ನಾಗೇಶ ! ( ಶೋಕಿಸುತ್ತಾಳೆ ) ಏನಯ್ಯಾ ! ನಾಗೇಶ ! ಇಂತೇನಾಯಿತೆಲೆ ಮಗುವೆ ! ಮಗುವೇ ! ನಿನ್ನನ್ನು ಹಾಡಿ ಹರಿಸಿದ ತಾಯಿಗೆ ತತ್‌ಕ್ಷಣ ದುಃಖವೇ ? ಮಗು ಏನಾಯಿತಪ್ಪs ( ಕೂಸು ಅಳುವುದು ಹೆಚ್ಚಾಗುತ್ತಧೆ.) ಅಯ್ಯೋ ! ಕಂದಾ ! ನಾಗೇಶ ! ಈ ಬಾಲಗ್ರಹ ರೋಗವು ನಿನ್ನಂಥವನಿಗೆ ಬಂದಿತೇ? ಶಿವ-ಶಿವಾ ( ನಿಟ್ಟುಸಿರೆಳೆದು ) ಎಲ್ಲೈ ಮುದ್ದು ಕಂದಾ ! ನಾಗೇಶ! ನನ್ನಕೂಡ ಚೆಕ್ಕಂದವಾಡುವ ನಿನ್ನ ದೇಹಕ್ಕೆ ಜರುಗಿದ ನೋವನ್ನು ಅದ್ಹೇಗೆ ಸೈರಿಸಲಿ ! ಮುನ್ನ ತಂಗೂಳ ತಿರಿದುಣ್ಣುವಾಗ ನಿನಗಾವ ರೋಗವಿಲ್ಲs ಮಗುವೇ ? ಭಯಾನಕವಾದ ಕಾಳಕೂಟ ವಿಷ ಸೇವಿಸಿದರೂ ರೋಗವಿಲ್ಲದ ನಿನಗೆ

ಏನಾಯ್ತಿದು ! ಮಗು ! ಕಂದಾ ! ಸುಕುಮಾರಾ! ಭೂತಗಳ ಕೂಡ ಸಂಚರಿಸುವ ಭೂತಪತಿಯಲ್ಲವೇ ನೀನು ! ಅಯ್ಯೊ ಮಗು ! ಕಂದಾ ! ನಾಗೇಶ ! ಓ ಎನ್ನದಾದೆ ಏಕಯ್ಯ ! ಅಡವಿಯಲಿ ಒಬ್ಬನೇ ಮಲಗಿ ಅಳುತ್ತಿರುವಾಗ ಎತ್ತಿಕೊಂಡು ಬರಲಿಲ್ಲವೇ ? ನಿನಗೆ ಮುನ್ನ ವಚನಕೊಟ್ಟಂತೆ ನಡೆದುದಾಗ-ಲಿಲ್ಲವೇ ? ಏಕೆ ? ಕಂದಾ...........

ಅಮ್ಮಕ್ಕ:—( ಬಿಕ್ಕಿ ಬಿಕ್ಕಿ ಅಳುತ್ತ )

**ಕಂದನ ರೋಗವು ಮಿಗಿಲಾಯ್ತಿ |**
**ಮುದ್ದು ಬಾಲನ ಮುಖ ಬಾಡಿತೆ ॥ ಪಲ್ಲ ॥**

**ಆಡುವ ಕಂದನಿಗೆಲ್ಲಿಯ ಬೇನೆ |**
**ಬಂದು ಎರಗಿತು ಸಿಡಿಲು ಎನಗೆ |**
**ನೀನಿಲ್ಲದ ಜಗವೆಲ್ಲ ಶೂನ್ಯ |**
**ನೀನಿಲ್ಲದ ಮನೆ ಮಸಣವೊ ॥ ೧ ॥**

**ದೇವನೆ ಕಂದನೆಂದಪ್ಪೀದೆ |**
**ಎನ್ನ ಭಕ್ತಿಯು ಬರಿದು ಆಯ್ತಿ |**
**ಮಾಯೆಯು ಶಿಶುವನ್ನು ಮಾಯೆ |**
**ಕೊಸರಿಕೊಂಡು ಒಯ್ಯುವಂತಾಯ್ತೆ ॥ ॥ ೨ ॥**

ಅಮ್ಮಕ್ಕ:--ಅಯ್ಯೋ ! ನನ್ನ ಜೀವನದ ಪುತ್ಥಳಿಯು ಕಪ್ಪನೆ ಕಂದಿತು. ಅಕ್ಕಟ ! ಅಕ್ಕಟಾ ಎನ್ನ ರನ್ನಗನ್ನಡಿಯು ಮಾಸಿತು! ಅಮೃ-ತವು ವಿಷವಾದ ಪರಿಯಂತೆನೆ ? ಈ ರೋಗಿಗೆ ನಾನಿನ್ನೇನು ಮಾಡುವುದು ? ಆರನ್ನು ಕರೆಸಲಿ ? ದೇವಾ ! ನನಗಾರುಂಟು? ಪರಮಾತ್ಮ ! ನೀನೇ ತಂದೆ-ತಾಯಿ! ನೀನೇ ನನ್ನನ್ನು ಸಲಹುವ ಮುದ್ದು ಮಗು ! ತಾಯಿ ಮೊಲೆಹಾಲು ನಂಜಾಗಿ ಕೊಲು ವಡೆ ಇನ್ನಾರಿಗೆ ದೂರುವುದೆಂದೆಯಾ ? ದೇವ! ದೇವ!

ನಾನು ಮಾಡಿದ ಅಪರಾಧವಾದರೂ ಏನು ? ಅಯ್ಯೋ ! ಶಿವ–ಶಿವಾ ಏನಾಯಿತಿದು! ನಾ ಬಯಸಿದುದು ಒಂದು. ಆದರೆ ಇಂದೆನ್ನ ಪಾಲಿಗೆ ಬಂದಿರುವುದು ಇನ್ನೊಂದು (ಎಂದು ಶೋಕ ಭರಿತಳಾಗಿ ನೆಲಕ್ಕುರುಳುವಳು. ಬಳಿಕ ತಾನಾಗಿಯೇ ಸಾವರಿಸಿಕೊಂಡು ಎದ್ದು )

ಅಮ್ಮಾ ! ನನ್ನ ಈ ರನ್ನ ಪುತ್ಥಳಿಯೇ ಕಳಚಿದಾಗ ನಾನಿನ್ನೇನು ಮಾಡುವದು ? ಆರಿಂದ ಈ ರೋಗವನ್ನು ಪರಿಹರಿಸಲಿ ! ಶಿವ–ಶಿವಾ ! ನೀನೇ ನನ್ನ ಸರ್ವಸ್ವ!ಕಾಯಿಕೊಳ್ಳು, ನಿನ್ನಧರ್ಮ! ಅಮ್ಮಾ, ಕೂಸಿನ ಸಂತಾಪವನ್ನು ಸಹಿಸಲಾರೆ ! ಅಮ್ಮಾ! ಕೂಸು ಮತ್ತಿಷ್ಟು ಬಳಲುತ್ತಿದೆಯಲ್ಲ ಕಂದಾ ! ನಿನ್ನ ಹೆತ್ತಾಕೆ ಹೊತ್ತು ಸಲಹದೆ ಹೋದರೂ ಅವಳಿಗಿಂತ ಸಾಕಿದವಳಿಗೆ ಹೆಚ್ಚು ದುಃಖ ! ಮಗುವೇ ! ನಿನ್ನ ಈ ನೋವನ್ನು ನೋಡುವದಕ್ಕಿಂತ ಮುನ್ನಮರಣವೇ ಮಹಾನವಮಿ ಎನಗೆ ! ( ಎಂದು ಸಮೀಪದಲ್ಲಿದ್ದ ಈಳಿಗೆಯಿಂದ ತನ್ನ ಶಿರಸ್ಸನ್ನೇ ಹೊಡೆದುಕೊಳ್ಳಲು ಹೋಗುತ್ತಾಳೆ. ಬಾಲಶಿಶು ಶಿವನಾಗಿ ಪ್ರತ್ಯಕ್ಷನಾಗುತ್ತಾನೆ. ಸುತ್ತೆಲ್ಲ ಚಿಜ್ಯೋತಿ ಆವರಿಸಿದೆ. ಶಿರಸ್ಸನ್ನು ಹೊಡೆದುಕೊಳ್ಳಲು ಹೋಗುವ ತಾಯಿಯನ್ನು ಹೋ ! ಹೋ ! ಎಂದು ತಡೆದಿದ್ದಾನೆ. ಬಿಜ್ಜಮಹಾದೇವಿ ಎದ್ದು ಕೈಮುಗಿದು ನಿಂತಿದ್ದಾಳೆ )

**ಪರಮಾತ್ಮ:**— ( ಆನಂದ ಭರಿತನಾಗಿ ) ಧನ್ಯ ! ಬಿಜ್ಜಮಹಾದೇವಿ ನೀನೇ ಧನ್ಯ ! ನನ್ನ ರಕ್ಷಣೆಗೈದ ನಿಜ ತಾಯಿ ನೀನೇ ಅಲ್ಲವೇ ? ನಿನ್ನ ಕಾಯಕ ನಿಷ್ಠೆಗೆ ಧನ್ಯನಾದೆ. ನಿನ್ನ ಶೀಲ ಚಾರಿತ್ರ್ಯಗಳಿಗೆ ಸಂತೋಷ ಭರಿತನಾದೆ. ಇಳೆಯೊಳಗೆ ನಿನ್ನಂಥವರನ್ನು ಕಾಣೆ ! ಅಮ್ಮ ನನಗಾಗಿ ತಾಯಿಯಾಗುವ ಹಂಬಲ ನಿನಗಿಷ್ಟಿದೆಯಲ್ಲ! ತಾಯಿ ! ಮರಣವೇ ಮಹಾನವಮಿ ನಿನಗಲ್ಲವೇ ?

ಧನ್ಯ ! ಅಮ್ಮಾ ಬಿಜ್ಜಮಹಾದೇವಿ ! ಮೆಚ್ಚಿದೇಂ ನಿನ್ನ ಮುಗ್ಧ ಭಕ್ತಿಗೆ ! ಬೇಡಿಕೋ ನಿನ್ನ ಇಚ್ಛೆಯನ್ನು !

**ಬಿಜ್ಜಮಹಾದೇವಿ:**—( ನಮ್ರದಿಂದ ) ದೇವಾ ! ಪರಮಾತ್ಮಾ ! ನನ್ನಿಚ್ಛೆಯನ್ನು ಬೇಡಿಕೊಳ್ಳಲೇ ? ಮತ್ತೇನು ಬೇಡಲಿ ದೇವಾ ! ಸಚ್ಚರಿತ ಸುಕುಮಾರಾ ! ನೀನು ಸುಖಿಯಾಗಿ ಇದ್ದು ನನ್ನ ಈ ಸಂತಾಪವನ್ನು ಪರಿಹರಿಸೆಂದು ಬೇಡಿಕೊಳ್ಳುವೆ.

**ಪರಮಾತ್ಮ:**—ಧನ್ಯ ! ತಾಯಿ ! ಧನ್ಯ ! ನಿನ್ನ ತಾಯಿತನಕ್ಕೆ ಮನ ಸೋತೆ. ನಿನ್ನಿಚ್ಛೆಯಂತೆಯೇ ಆಗಲಿ! ನೀನು ತಾಯಿಯಾಗಿಯೇ ಇರಮ್ಮಾ. ಅದೋ, ಅಲ್ಲಿ ನೋಡು ನಿನ್ನ ರನ್ನ ಪುತ್ಥಳಿಯನ್ನು ( ಮಾಯವಾಗುತ್ತಾರೆ. ಅಲ್ಲಿ ಕೂಸು ಚಿಕ್ಕಂದದಿಂದ ಚಲ್ಲಾಟ ಮಾಡುತ್ತದೆ. ಬಿಜ್ಜಮಹಾದೇವಿಗೆ ಆನಂದವೇ ಆನಂದ !.)

**ಬಿಜ್ಜಮಹಾದೇವಿ:**—( ಕೂಸನ್ನು ಎತ್ತಿಕೊಂಡು, ಮುದ್ದುಕೊಡುತ್ತ.

**" ನೀನೊಲಿದರೆ ಕೊರಡು ಕೊನರುವುದಯ್ಯಾ !**
**ನೀನೊಲಿದರೆ ಬರಡು ಹಯನಹುದಯ್ಯಾ !**
**ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ !**
**ನೀನೊಲಿದರೆ ಸಕಲ ಪಡಿಪದಾರ್ಥ ಇದರಲ್ಲಿಪ್ಪವು**
**ಕೂಡಲ ಸಂಗಮ ದೇವಾ "**

( ಪರದೆ ಮುಚ್ಚುವುದು )

**ಮುಗ್ಧ ಭಕ್ತೆ ! ಮಹಾತಾಯಿ ! ಬಿಜ್ಜಮಹಾದೇವಿಗೆ ಶರಣು ! ಶರಣು !**

**— ಮಲ್ಲಿಕಾರ್ಜುನ**

# ಹಾರೈಕೆ !

ಕನ್ನಡ ಸಾಹಿತ್ಯದಲ್ಲಿ ನಾಟಕಗಳ ರಚನೆ ಹಿಂದಿನ ಕಾಲದಲ್ಲಿಯೂ ಆಗಲಿಲ್ಲ. ಈಗಲೂ ಆಗುತ್ತಿಲ್ಲ. ಮುಂದೂ ಈ ಕೊರತೆ ತುಂಬಿ ಬರುವದೋ ಇಲ್ಲವೋ ಎಂಬ ಸಂಶಯಕ್ಕೆ ಆಧಾರಗಳಿಲ್ಲವೆ ಇಲ್ಲ. ಆದರೂ ಹೊಸಗನ್ನಡದ ಉದಯ ಕಾಲದಿಂದ ಸಾಹಿತ್ಯದ ವಿವಿಧಾಂಗಗಳ ಪ್ರಗತಿಯಾದಂತೆ ನಾಟಕ, ಏಕಾಂಕ, ನಾಟ್ಯಛಟಾ ಮೊದಲಾದ ನಾಟ್ಯಸಾಹಿತ್ಯವು ನಿರ್ಮಾಣವಾಗುತ್ತಲಿದೆ. ಅನೇಕ ನಾಟಕಕಾರರ ಕೃತಿಗಳು ಪ್ರಕಟಗೊಂಡಿವೆ. ನಾಟಕ ಪ್ರಕಟವಾದರೆ ಮಾತ್ರ ರಂಗಭೂಮಿಯ ಪ್ರಗತಿಯಾದಂತಾಗಲಿಲ್ಲ. ನಾಟ್ಯರಚನೆಯೊಂದಿಗೆ ಅವರ ಪ್ರಯೋಗವೂ ಜರುಗುತ್ತಿರಬೇಕು. ಅಂದರೆ ನಾಟ್ಯರಚನೆ, ಪ್ರಯೋಗ, ಅಭಿನಯ-ಕೌಶಲ್ಯಗಳೆಲ್ಲ ಮುಪ್ಪುರಿಗೊಂಡು ತಲೆಯೆತ್ತಿ ಬಾಳಲು ಸಾರ್ಥಕ್ಯತೆಯನ್ನು ಪಡೆಯಲವಕಾಶವಾಗುತ್ತದೆ. ಆ ದಿಶೆಯಲ್ಲಿ ಶ್ರೀ. **ಲಕ್ಷ್ಮಿಯವರು** ನಾಟಕ ಬರೆಯುತ್ತಾರೆ: ಅವುಗಳ ಪ್ರಯೋಗವೂ ಅಲ್ಲಲ್ಲಿ ನಡೆಯುತ್ತಲಿದೆ. '**ಮಹಾದೇವಿಯಕ್ಕ**' ಎಂಬ ಅವರ ಮೊದಲನೆಯ ನಾಟಕ ಎರಡನೆಯಾವೃತ್ತಿಯನ್ನು ಕಂಡಿವೆ. ಅದರ ಪ್ರಯೋಗಗಳೂ ಯಶಸ್ಸನ್ನು ಸಂಪಾದಿಸಿವೆ ಎಂಬ ಮಾತನ್ನು ಇಲ್ಲಿ ಎತ್ತಿ ಹೇಳಲು ಹರುಷವೆನಿಸುತ್ತಿದೆ.

ನಾಟಕವೆಂದರೆ ದೃಶ್ಯಸಾಹಿತ್ಯ. ಸಾಹಿತ್ಯದಿಂದಾಗುವ ಆನಂದದಂತೆ ಈ ದೃಶ್ಯವೂ ಆನಂದವನ್ನೀಯುತ್ತಿದೆ. ಓದುವ ಸಾಹಿತ್ಯಕ್ಕಿಂತ ನೋಡಿದ ಸಾಹಿತ್ಯವು ಕಣ್ಣೆದಿರು ಕಟ್ಟುತ್ತದೆ; ಪರಿಣಾಮವನ್ನೂ ಉಂಟು ಮಾಡುತ್ತದೆ. ಅಂಥ ಸಾಫಲ್ಯವನ್ನು ಪಡೆದಾಗಲೆ ಆ ಕೃತಿಗೆ, ಆ ಅಭಿನಯಕ್ಕೆ ಒಂದು ಬೆಲೆ ಬರುವದುಂಟು. ಆಗ ಅಂಥ ಕೃತಿ "ಸತ್ಯಂ ಶಿವಂ, ಸುಂದರಂ" ಎಂಬ ಮಾತಿಗೆ ಸಾಕ್ಷಿಯಾಗಿ ನಿಲ್ಲುವುದು.

ಪ್ರಸ್ತುತ ನಾಟಕ '**ಬಿಜ್ಜಮಹಾದೇವಿ**'ಯ ದೃಶ್ಯ ಪ್ರಯೋಗವು ಮನಂಬೊಗುವಂತೆ ರಚನೆಯಾಗಿದೆ ಎಂದು ಹೇಳಬಹುದು. ಭಕ್ತಿಯ ಎರಕದಿಂದ ಹೊಯ್ದಿರುವ ಈ ನಾಟ್ಯವಸ್ತುವು ಲೌಕಿಕವೆನಿಸಿದರೂ ಅಲೌಕಿಕತೆಯನ್ನು ಪ್ರಕಟನೆಗೊಳಿಸುತ್ತವೆ. ಶ್ರೀ. **ಲಕ್ಷ್ಮಿಯವರು** ಇಂಥ ಹಲವಾರು ಕೃತಿಗಳನ್ನು ನಿರ್ಮಿಸಲಿ! ಪ್ರಯೋಗ ನಡೆಸಲಿ! ಎಂದು ಹೃತ್ಪೂರ್ವಕವಾಗಿ ಹಾರೈಸುವೆ.

**ಗೋವಿಂದ ವೆಂಕಟೇಶ ಚುಳಕಿ.**

Printed by B. D. Changule at Shri Mahavir Press, Belgaum
Published by A. R. Patil, President of V. S. Samiti, Belgaum

# ಹಾರೈಕೆ !

ಕನ್ನಡ ಸಾಹಿತ್ಯದಲ್ಲಿ ನಾಟಕಗಳ ರಚನೆ ಹಿಂದಿನ ಕಾಲದಲ್ಲಿಯೂ ಆಗಲಿಲ್ಲ. ಈಗಲೂ ಆಗುತ್ತಿಲ್ಲ. ಮುಂದೂ ಈ ಕೊರತೆ ತುಂಬಿ ಬರುವದೋ ಇಲ್ಲವೋ ಎಂಬ ಸಂಶಯಕ್ಕೆ ಆಧಾರಗಳಿಲ್ಲದೆ ಇಲ್ಲ. ಆದರೂ ಹೊಸಗನ್ನಡದ ಉದಯ ಕಾಲದಿಂದ ಸಾಹಿತ್ಯದ ವಿವಿಧಾಂಗಗಳ ಪ್ರಗತಿಯಾದಂತೆ ನಾಟಕ, ಏಕಾಂಕ, ನಾಟ್ಯಛಟಾ ಮೊದಲಾದ ನಾಟ್ಯಸಾಹಿತ್ಯವು ನಿರ್ಮಾಣವಾಗುತ್ತಲಿದೆ. ಅನೇಕ ನಾಟಕಕಾರರ ಕೃತಿಗಳು ಪ್ರಕಟಗೊಂಡಿವೆ. ನಾಟಕ ಪ್ರಕಟವಾದರೆ ಮಾತ್ರ ರಂಗಭೂಮಿಯ ಪ್ರಗತಿಯಾದಂತಾಗಲಿಲ್ಲ. ನಾಟ್ಯರಚನೆಯೊಂದಿಗೆ ಅವರ ಪ್ರಯೋಗವೂ ಜರುಗುತ್ತಿರಬೇಕು. ಅಂದರೆ ನಾಟ್ಯರಚನೆ, ಪ್ರಯೋಗ, ಅಭಿನಯ-ಕೌಶಲ್ಯಗಳೆಲ್ಲ ಮುಪ್ಪುರಿಗೊಂಡು ತಲೆಯೆತ್ತಿ ಬಾಳಲು ಸಾರ್ಥಕ್ಯತೆಯನ್ನು ಪಡೆಯಲವಕಾಶವಾಗುತ್ತದೆ. ಆ ದಿಶೆಯಲ್ಲಿ **ಶ್ರೀ. ಲತ್ತೆಯವರು** ನಾಟಕ ಬರೆಯುತ್ತಾರೆ: ಅವುಗಳ ಪ್ರಯೋಗವೂ ಅಲ್ಲಲ್ಲಿ ನಡೆಯುತ್ತಲಿದೆ. '**ಮಹಾದೇವಿಯಕ್ಕ**' ಎಂಬ ಅವರ ಮೊದಲನೆಯ ನಾಟಕ ಎರಡನೆಯಾವೃತ್ತಿಯನ್ನು ಕಂಡಿದೆ. ಅದರ ಪ್ರಯೋಗಗಳೂ ಯಶಸ್ಸನ್ನು ಸಂಪಾದಿಸಿವೆ ಎಂಬ ಮಾತನ್ನು ಇಲ್ಲಿ ಎತ್ತಿ ಹೇಳಲು ಹರುಷವೆನಿಸುತ್ತಿದೆ.

ನಾಟಕವೆಂದರೆ ದೃಶ್ಯಸಾಹಿತ್ಯ. ಸಾಹಿತ್ಯದಿಂದಾಗುವ ಆನಂದದಂತೆ ಈ ದೃಶ್ಯವೂ ಆನಂದವನ್ನೀಯುತ್ತಿದೆ. ಓದುವ ಸಾಹಿತ್ಯಕ್ಕಿಂತ ನೋಡಿದ ಸಾಹಿತ್ಯವು ಕಣ್ಣೆದಿರು ಕಟ್ಟುತ್ತದೆ; ಪರಿಣಾಮವನ್ನೂ ಉಂಟುಮಾಡುತ್ತದೆ. ಅಂಥ ಸಾಫಲ್ಯವನ್ನು ಪಡೆದಾಗಲೆ ಆ ಕೃತಿಗೆ, ಆ ಅಭಿನಯಕ್ಕೆ ಒಂದು ಬೆಲೆ ಬರುವದುಂಟು. ಆಗ ಅಂಥ ಕೃತಿ "ಸತ್ಯಂ ಶಿವಂ, ಸುಂದರಂ" ಎಂಬ ಮಾತಿಗೆ ಸಾಕ್ಷಿಯಾಗಿ ನಿಲ್ಲುವುದು.

ಪ್ರಸ್ತುತ ನಾಟಕ '**ಬಿಜ್ಜಮಹಾದೇವಿ**'ಯ ದೃಶ್ಯ ಪ್ರಯೋಗವು ಮನಂಬೊಗುವಂತೆ ರಚನೆಯಾಗಿದೆ ಎಂದು ಹೇಳಬಹುದು. ಭಕ್ತಿಯ ಎರಕದಿಂದ ಹೊಯ್ದಿರುವ ಈ ನಾಟ್ಯವಸ್ತುವು ಲೌಕಿಕವೆನಿಸಿದರೂ ಅಲೌಕಿಕತೆಯನ್ನು ಪ್ರಕಟನೆಗೊಳಿಸುತ್ತದೆ. **ಶ್ರೀ. ಲತ್ತೆಯವರು** ಇಂಥ ಹಲವಾರು ಕೃತಿಗಳನ್ನು ನಿರ್ಮಿಸಲಿ! ಪ್ರಯೋಗ ನಡೆಸಲಿ! ಎಂದು ಹೃತ್ಪೂರ್ವಕವಾಗಿ ಹಾರೈಸುವೆ.

**ಗೋವಿಂದ ವೆಂಕಟೇಶ ಚುಳಕಿ.**

Printed by B. D. Changule at Shri Mahavir Press, Belgaum
Published by A. R. Patil, President of V. S. Samiti, Belgaum